# ಹೊಸ ಬೊದ್ಕ್

## ಅರೆಭಾಷೆ ಕಥಾ ಸಂಕಲನ

ಉದಯಕುಮಾರಿ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.
ಮಡಿಕೇರಿ, ಕೊಡಗು ಜಿಲ್ಲೆ – 571 201

ಹೊಸ ಬೊದ್ಕು

**'HOSA BODKU'** a collection of stories in Arebhase language written by Udayakumari, Balambi Post, Chembu village, Madikeri Taluk, Kodagu District, Published by 'Karnataka Arebhase Samskrithi Mathu Sahitya Academy.

ಪ್ರಕಟಣೆ **: 2016**

ಪ್ರತಿಗಳು **: 500**

**ಬೆಲೆ : ರೂ.** 70/- Price : Rs. 70/-

**ಪುಟಗಳು :** viii + 50



ಸಲಹ ಸಮಿತಿ :

**ಶ್ರೀ ಕೊಲ್ಯದ ಗಿರೀಶ್**
**ಡಾ. ಪೂವಪ್ಪ ಕಣಿಯೂರು**
**ಡಾ. ಕೋರನ ಸರಸ್ವತಿ ಪ್ರಕಾಶ್**
**ಶ್ರೀ ಮೋಹನ ಸೋನ**
**ಶ್ರೀಮತಿ ಸಂಗೀತ ರವಿರಾಜ್**

ಪ್ರಕಾಶಕರು : **ರಿಜಿಸ್ಟ್ರಾರ್**
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.

**ಪುಸ್ತಕ ದೊರೆಯುವ ಸ್ಥಳ :**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,
ಕಾಫಿ ಕೃಪ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ, ಮಡಿಕೇರಿ.
ದೂ. : 08272–223055

ಮುದ್ರಣ :
ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,
ಮಡಿಕೇರಿ, ಕೊಡಗು
Ph : 08272-224919, 9448135592

# ಸಂಪಾದಕೀಯ

'ಬಾಸೆಂತೇಳುವ ಬೊಳ್ಪು ಇತ್ಲರೆ, ಇಡೀ ಜಗತ್ತ್ ಇರ್ಲ್‌ಲಿ ಇರಕಾಯ್ತ್', ಇದ್ ಬಾಸೆನ ಬಗ್ಗೆ ಪಂಡಿತ 'ದಂಡಿ' ಹೇಳ್ದ ಮಾತ್‌ನ ಅರೆಬಾಸೆ ಅನುವಾದ ನಿಜ, ಮನ್ಸನ ಸಂವಹನ ಬಾಳಾ ಮುಖ್ಯವಾಗಿ ಬಾಸೆಲಿ ಬುಟ್ರೆ ಬೇರೆ ಇಲ್ಲೆ. ಹಿಂಗಿರಿಕಾನ ಯಾವುದೇ ಬಾಸೆನಾದ್ರು ಗಟ್ಟಿಯಾಗಿ ಉಳ್ಸುವ ಬೆಳ್ಸುವ ಕೆಲ್ಸನ ಆಯಾ ಬಾಸೆ ಮಾತಾಡವು ಮಾಡಿಯೇ ತೀರಕು. ಅರೆಬಾಸೆಗೆ ನೂರಾರು ವರ್ಸಗಳ ಇತಿಹಾಸ ಇದ್ದರುಸ ಇದಿಕೆ ಪ್ರಖರವಾದ ಮನ್ನಣೆ ಈಗ ಸಿಕ್ತ ಉಟ್ಟು.. ಅರೆಬಾಸೆ ಅಕಾಡೆಮಿ ಎಲ್ಲಾ ಊರ್‌ಗಳಲ್ಲಿ ಹಲವಾರ್ ಅರೆಬಾಸೆ ಸಂಸ್ಕೃತಿಗೆ ಸಂಬಂಧಪಟ್ಟ ಕಾರ್ಯಕ್ರಮ ಮಾಡಿಟು. ಇದರೊಟ್ಟಿಗೆ ಸಾಹಿತ್ಯ ಬೆಳ್ಸುವ ದೊಡ್ಡ ಆಕಾಂಕ್ಷೆಲಿ ಅರೆಬಾಸೆಲಿ ಬರ್ದ ಪುಸ್ತಕಗಳ ಪ್ರಕಟಿಸ್ತ ಉಟ್ಟು. ಈವರೆಗೆ ಹತ್ತು ಪುಸ್ತಕಗಳ ಪ್ರಕಟಿಸಿ ಲೋಕಾರ್ಪಣೆ ಮಾಡಿ ಆಗಿಟು. ಈಗ ಈ ಸಾಲಿಗೆ ಹೊಸಬೊದ್ಕು ಕಥಾ ಸಂಕಲನನು ಯಾಗೊಳು ಇದ್ದದೆ. ಹೊಸ ತಲೆಮಾರುನವು ಹೆಚ್ಚೆಚ್ಚ್ ಅರೆಬಾಸೆಲಿ ಬರಿಯಕೆ ಸುರುಹಚ್ಚಿಕನಕು. ಕನ್ನಡಲಿ ಮಾತ್ರ ಬರಿವಂತ ಅರೆಬಾಸೆನವು ನಮ್ಮ ನೊಡುಲಿ ಸುಮಾರ್ ಒಳ. ಅವೆಲ್ಲವುಸ ಅರೆಬಾಸೆಲಿ ಬರಿಯಕೆ ಪ್ರಾರಂಭಿಸಕು. ಈ ಮೂಲಕ ಅರೆಬಾಸೆ ಸಾಹಿತ್ಯಕ್ಕೆ ಉತ್ತೇಜನ ನೀಡಕು. ಸಾಹಿತ್ಯ ಬೆಳ್ಕಂಡ್ ಹೋಕನ ಬಾಸೆ ಉಳ್ದದೆ.

ಈ ಕೃತಿನ ಹೊರತರ್ವಲ್ಲಿ ಅಧ್ಯಕ್ಷರು ಮತ್ತು ಸಂಪಾದಕ ಮಂಡಳಿನ ಎಲ್ಲವು ಸಹಕರಿಸ್ಯೊಳ ಒಪ್ಪವಾಗಿ ಅಚ್ಚ್ ಹಾಕ್ಸಿ ಕೊಟ್ಟ ಶ್ರೀ ಕೃಷ್ಣ ಪ್ರಿಂಟರ್ಸ್ ಮಡಿಕೇರಿ ಇವ್ಕೆ ಕೃತಜ್ಞತೆಗಳು.

ಸಂಪಾದಕ ಮಂಡಳಿ ಪರವಾಗಿ

**– ಸಂಗೀತ ರವಿರಾಜ್**

**ಹೊಸುರು ಮನೆ**

**ಚೆಂಬು.**

# ಮುನ್ನುಡಿ

ಶ್ರೀಮತಿ ಉದಯಕುಮಾರಿಯವರ 'ಹೊಸ ಬೊದ್ಕು' ಅವರ ಸುರುನ ಕಥೆಗಳ ಸಂಕಲನ. ಇಲ್ಲಿನ ಎಲ್ಲಾ ಕಥೆಗಳ್ಲಿಸ ಹಳ್ಳಿ ಜೀವನದ ಹೊಸ ಹೊಸ ಪರಿಕಲ್ಪನೆಗ ನಾವುಗೆ ಓದಿಕನ ಸಿಕ್ಕುವೆ. ಅರೆಬಾಸೆ ಉಳಿಯಕೆ ಹಳ್ಳಿಗಳೇ ಮುಖ್ಯ ಕಾರಣ. ಏಕೆಂತ ಹೇಳ್ರೆ ನಮ್ಮ ಜನಾಂಗದವು ಹೊರಗಡೆ ಊರಿಗೆ ದುಡಿಯಕೆ ಹೋಕನ ಅಲ್ಲಿ ವ್ಯವಹಾರಕ್ಕೆ ಬೇರೆ ಬಾಸೆಗಳ ಮಾತಡದೆ ಇರಿಕೆ ಆದ್ಲೆ. ಆದರೆ ಹಳ್ಳಿಲಿ ಹಂಗಲ್ಲ. ಎಲ್ಲಾ ಅರೆಬಾಸೆವು ಇರಿಕಾನ ಅದರ್ನೆ ಮಾತಾಡಿ ಬಾಸೆ ಉಳಿಯಕೆ ಸಾಧ್ಯ ಆದೆ.

ಇಲ್ಲಿನ ಕಥೆಗಳ್ಲಿ ಒಟ್ಟಾಗಿ, ಬದ್ಕಿಕೆ ಬೇಕಾದಷ್ಟ್ ಆಧುನಿಕತೆ ಸಾಕ್ ನಾವುಗೆ ಎಂಬ ಕಳಕಳಿ ತುಂಬಾ ಉಟ್ಟು. ಕಾಲ ಬದಲಾಕನ ಆಗುವ ಎಲ್ಲಾ ಸೋರಿಕೆಗ ಆಗಿ ಇಡೀ ಲೋಕನೆ ಹಾಳಾಗುವ ಮುಂದೆ ಜನಗ ಎದ್ದು ಕಣಕು ಎಂಬ ಭಾವ ಇವರ ಬರಹಲಿ ಪಡಿಮೂಡಿಟು. ಸಮಾಜಲಿ ನಡಿವ ತಣ್ಣಗೆನ ಕ್ರೌರ್ಯಗ ಇರ್ಲಿ, ಸಂಬಂಧಗ ಯಾವ ರೀತಿಲಿ ಅರಳಿಕಂಡದೆ ಎಂಬುದಿರ್ಲಿ, ಪ್ರೀತಿ, ದ್ವೇಷ ಹಿಂಗೆ ಇವುಗಳ ಅಧಿಪತ್ಯಲಿ ಕಥೆಗಳ ಸುಳಿ ಅರಳಿಕಂಡುಟು. 'ಮತ್ತೆ ಹಿಡ್ದ ಗುರ್ತ' ಕಥೆಲಿ ಹಚ್ಚ್ಯನವರ ಅನುಭವಲಿ ಬಂದಿರುವ ಸಾಹುಕಾರ ಮತ್ತೆ ಆಳುಗಳ ಸಂಬಂಧ ಹೆಂಗೆ ಇದ್ದದೆ ಎಂಬ ಮರ್ಮ ಉಟ್ಟು. ಕೈಗೆ ಬಂದದ್ ಬಾಯಿಗೆ ಬಾತ್ಲೆ, ಹೊಸ ಬೊದ್ಕು, ಅಮ್ಮಂಗೆ ಕೊಟ್ಟ ಮೊರ್ಯಾದಿ, ಕಣ್ಣ್ ನೀರ್ ಬಿದ್ದ ಆ ಹೊತ್ತ್ ಪ್ರೀತಿಂತ ಹೇಳಿರಿ ಹಿಂಗೆನೆ, ಕುಸಿ ಕೊಟ್ಟ ಕೂಸು ಇತ್ಯಾದಿ ಕಥೆಗಳ ಬರ್ದ ಶೈಲಿ ಬಾರಿ ಪೊರ್ಲುಲಿ ಉಟ್ಟು.

ಇವರ ಬರಹಲಿ ಅರೆಬಾಸೆಗೆ ಮತ್ತೆ ನಮ್ಮ ಸಂಸ್ಕೃತಿಗೆ ಮಹತ್ವ ಕೊಟ್ಟ್ ಬರ್ದದ್ ಎದ್ದ್ ಕಂಡದೆ. ಆದರೆ ಕಥೆನ ವಸ್ತು ಎಳೆಯಾಗಿ ಬಿಡ್ಸಿಕಂಡ ಸಂದರ್ಭಲಿ ಕೆಲವು ಕೊರತೆಗ ಕಂಡರೂ, ಇವರ ಇನ್ನ್ ಮುಂದಿನ ವಿಸ್ತೃತವಾದ ಓದು, ಇನ್ನೂ ವಿಸ್ತೃತವಾಗಿ ಬರಿಯಕೆ ಸಾಧ್ಯ ಆದೆ ಎಂಬ ಭರವಸೆ ನಂಗುಟ್ಟು. ಲೇಖಕಿಯವರ ಇನ್ನೊಂದು ವಿಶಿಷ್ಟತೆ ಏನಂತ ಹೇಳ್ರೆ ಇವು ಬರಿಯಕೆ ಸುರು ಮಾಡ್ದೆ ಅರೆಬಾಸೆಲಿ ಮಾತ್ರ. ಕತೆ, ಕವಿತೆ ಬರ್ದ್, ಶೋಭಾನೆಗಳ ಸಂಗ್ರಹ ಮಾಡಿ ಆಕಾಶವಾಣಿಲಿ ಓದ್ತಿದ್ದೋ. ಅರೆಬಾಸೆಗೆ ಒತ್ತು ನೀಡಿ ಬರ್ದಂರ್ದ ಬಾಸೆನಹಿಡಿತ ಬರಹಲಿ ಲಾಯ್ಕಲಿ ಮೂಡಿ ಬಂದುಟು. ಬಾಷಾ ಅಲ್ಪಸಂಖ್ಯಾತರಾಗಿರುವ ನಮ್ಮ ಅರೆಬಾಸೆವು ಹೆಚ್ಚೆಚ್ಚು ಇಂಥ ಸಾಹಿತ್ಯ ಕೃತಿನ ಬರಿಯಕು ಎಂಬ ಸದಾಶಯ ನಮ್ಮದ್.

ದಿನಾಂಕ:10\2015

**ಸಂಗೀತ ರವಿರಾಜ್**
**ಹೊಸೂರು, ಚೆಂಬು**

# ಒಳ ಪುಟಲಿ

# ಕೈಗೆ ಬಂದದ್ ಬಾಯಿಗೆ ಬಾತ್ಲೆ

ಛೆ! ಇವಂಗೆ ಏನಾವುಟು? ಹುಚ್ಚಿಮೊನಿ ಹಿಡ್ದುಟಾ? ಇಲ್ಲೆ ಹೆಣ್ಮಕ್ಕಳ ಹುಚ್ಚ ಅಂತು ಅಲ್ಲನೇ ಅಲ್ಲ. ಹಂಗೆ ಆದರೆ ನನ್ನಿಂದ ಎಷ್ಟೇಷ್ಟೋ ಪೊರ್ಲುನ ಗೂಡೆಗ ಈ ಊರುಲಿ ಇಲ್ಲೆನ ಯಾಕೆ ನನ್ನನ್ನೇ ಇಷ್ಟ್ ಇಷ್ಟಪಡ್ದು? ಇವ ಅಂಥಂವ ಅಲ್ಲ. ಇವಂಗೆ ಯಾವ ತರಲಿ ಸುಳ್ಳು ಹೇಳಿರೂ ಇವನ ಹಠನ ಬುಡ್ದುಲೆ. ಸುಳ್ಳು ಹೇಳಿರು ಅಲ್ಲ ಬಾಯಿಗೆ ಬಂದಾಂಗೆ ಬೊಯ್ದಿರು ಇವಂಗೆ ಮಾನ ಮೊರ್ಯಾದೆ ಇಲ್ಲೆ. ಇವನ ಕೈಂದ ತಪ್ಪಿಸಿ ಕಂಬಕೆ ಬೇಕಾಗಿ ಇಲ್ಲಿಂದ ಬುಟ್ಟ್ ಹೋದರೆ? ನನ್ನ ಮಾವಂಗೆ ಕೆ.ಬಿ ಕೊಡಿಕೆ ಆಗದಂತ ಕೆಟ್ಟ ಮಾತ್‌ಗಳೇ ಜನಗಳ ಬಾಯಿಲಿ ಬಾದು. ಓ ಅದ್ಕೆ ಅಂದ್ ಅಂವ ಬೇಕಾಯ್ತ್ ಈಗ ಇವನ ಬಿಡ್ದ್ ಹೋವುಟು. ಹಂಗೆ ಇವಂಗೆ ಮೋಸ ಮಾಡಿ ಬೇರೆವರ ಒಳ್ಳೆದ್ ಮಾಡಿಕಂಡ್ ಅವನ ಒಟ್ಟಿಗೆ ಓಡಿ ಹೋವುಟು. ಇಡೀ ಊರುಲಿ ಗಾಳಿ ಸುದ್ದಿ ಹಂರ್ದ್ದಿರೆ ಮತ್ತೆ ಇಡೀ ಊರುನ ಹೆಣ್ಣ್ ಮಕ್ಕಳಿಗೆ ನನ್ನಿಂದಾಗಿ ಕೆಟ್ಟ ಹೆಸ್‌ರ್ ಬಾದು. ಅದ್ ನಂಗೆ ಇಷ್ಟ ಇಲ್ಲೆ, ಸರಿನೂ ಕಾಂಬೊದ್ಲೆ. ಎಂತರ ಮಾಡ್ದು ಈಗ? ನನ್ನ ಸಂಕಟನ ಯಾರ ಒಟ್ಟಿಗೆ ಹೇಳ್ದು? ಹೇಳಿರೆ ಅದರ ಕೇಳಿಕಂಬ ಕಿವಿಗಳೆ ಇಲ್ಲೆ. ಕೇಳಿರೂ ಒಂದ್ ಕೆಬಿಲಿ ಕೇಳಿ ಇನ್ನೊಂದ್ ಕೆಬಿಲಿ ಬುಡದ ಜನಗಳೇ ಒಳದ್. ಒಂದ್ ವೇಳೆ ಮಾವನ ಒಟ್ಟಿಗೆ ಹೇಳಿರೆ ಅತ್ತೆ ಅವರ ಬುಡಿಕಿಲೆ. ಇವನ ಹೆಂಗೆ ಸರಿದಾರಿಗೆ ತಾದು? ಯಾವ ಉಪಾಯನ ಕಂಡ್ ಹಿಡಿಯಕೆ ಆಗದೆ ಎರಡು ಮೂರು ದಿನಂದ ಗಂಜಿ, ನೀರ್, ಬುಟ್ಟ್ ಮನ್ಸ್‌ಲೇ ಕೊರ್ಗಿಕೆ ಸುರು ಮಾಡ್ತ್ ಗೀತ.

ಸಂಕಟ ತುಂಬಿ ಹೋಗಿ ಮನ್ಸ್‌ನ ಬಿಚ್ಚಿ ನೋಡ್ರೆ ಅದ್ಕೆ ಸರಿಯಾದ ದಾರಿ ಕಾಣದೆ ಸಾವಿರ, ಸಾವಿರ ತರಲಿ ಆಲ್ಸಿ ನೋಡ್ತ್.

ಛೇ ನಾ ಹುಟ್ಟಿದೆ ತಪ್ಪಾತ್ ಹಿಂದೆ ಯಾರೋ ಮಾಡ್ದ ತಪ್ಪುಗಾಗಿ ದೇವ್ರು ನಂಗೆ

## ಹೊಸ ಬೊದ್ಕು

ಜಲ್ಮ ಕೊಟ್ಟ್ ನಾನೇ ಅದರ ಅನುಭವಿಸುಕುಂತ ನನ್ನ ಹಣೆಲಿ ಬರ್ದುಟು ಕಂಡದೆ. ಅಂದ್ ನಾ ಹುಟ್ಟಿದಾಂಗೆ ಸತ್ತ್ ಹೋಗಿದರೆ ಇಂತ ನರ್ಕಕೆ ಬೀಳಿಕಿತ್ಲೆ. ಕಣ್ಣೀರ್ ಹನ್ಕಿಸಿಕಂಡ್ ಕುದ್ದಿತ್ತ್.

ಗೀತನ ಅಯ್ಯೆ ಜಾನಕಿ. ಅದರ ಗಂಡ ಸತ್ತ್ ಹೋದ ಮೇಲೆ ಹುಬ್ಬಳಿಲಿ ಮನೆ ಮಾಡಿಕಂಡ್ ಇತ್ತ್. ಆಗ ಗೀತಂಗೆ ಐದ್ ವರ್ಷ ಗೀತ ಶಾಲೆಗೆ ಹೋಕೆ ಅದರ ಸೋದರ ಮಾವ ತಂದ್ ಸಾಂಕಿ ಅದ್ಕೆ ಎಷ್ಟ್ ಖರ್ಚಿ ಮಾಡ್ತಿದ್ದ ಅಷ್ಟೇ ಲಾಯ್ಕ ಓದಿ ಜಾಣೆ ಆಗಿತ್ತ್. ಈಗ ಮಾವಂಗೆ ಮೊದುವೆ ಆಗಿ ಬಂದ ಸೋದರತ್ತೆ ಗೀತಂಗೆ ಕಷ್ಟಗಳ ಕೊಡಿಕೆ ಸುರು ಮಾಡ್ತ್.

ಇನ್ನ್ ನೀವು ಯಾರ್‍ಯಾರ ಮಕ್ಕಳ ತಂದ್ ಸಾಂಕುದು ಬೇಡ ಎಲ್ಲ ಇದ್ಕೆನೇ ಖರ್ಚಿ ಮಾಡ್ರೆ ನಾಳೆ ನಾವ್ಗೆ ಮಕ್ಕ ಆದವೆ. ಇದರ ಕಾರ್ಯ ಕಳಿಯಕನ ಮುಟ್ಟ ಲಾಯ್ಕಲಿ ಇರ್ದು ನೀವು ಇದರ ಎಲ್ಲಿಗಾದ್ರ್ ಕಳ್ಸಿ . ನಾವ್ಗೆ ಅಂತ ಪಾಪ ಪುಣ್ಯ ಬೇಡ. ಎಷ್ಟೇಷ್ಟೋ ಗೂಡೆಗ ಇದರ ಹಂಗೆ ಇದ್ದವು ಒಳ. ಸಾಂಕಿ ಸಾಂಕಿ ಅವರ ದಾರಿಗೆ ಬಂದ ಮೇಲೆ ಸಾಂಕಿದವುಕೆ ಏನಾರೊಂದ್ ಕೀಲ್ ಇಸಿ ಹೋದವೆ.

ಗಂಡಂಗೆ ಬುದ್ದಿ ಹೇಳಿಕೆ ಸುರು ಮಾಡ್ತ್. ಹೆಣ್ಣ್‌ನ ಮಾತ್ ಕೇಳ್ದೋ, ಸೊಸೆನ ಸಾಂಕುದಾ? ಅತ್ತ ಅಗೆಕೆ ಅಲ್ಲ ಇತ್ತ ನುಂಗಿಕೆ ಅಲ್ಲದಾಂಗೆ ಆತ್. ಛೆ ಹೆಂಗೂ ತಬ್ಬುಲಿ ಕೂಸು ಇಲ್ಲಿ ಇರ್ದು ಬೇಡಂತ ಹೆಂಗೆ ಹೇಳ್ದು? ಅಯ್ಯೆ ಇದ್ದಿದರೆ ಬುಟ್ಟ್ ಬುಡಕಾಯ್ತ್. ಈಗ ನೆಡು ನೀರ್‌ಲಿ ಕೈ ಬುಟ್ಟಾಂಗೆ ಆದೆ. ಸೊಸೆನ ಮೊರೆ ನೋಡ್‌ಕನ ಮಾವನ ಹೊಟ್ಟೆ ತುಂಬುತ್ತಿತ್ತ್. ಯಾಗೋಳ್ ಹೆಣ್ಣ್‌ನ ಪರ್ಚಟ ಜೋರ್ ಆಕಂಡ್ ಬಾತ್.

ಒಂದ್ ದಿನ ಹೆಣ್ಣ್ ತೊವುರ್ ಮನೆಗೆ ಹೋಗಿತ್. ಸೊಸೆನ ಹಕ್ಕಲೆ ಕರ್ದ್ ಕುದ್ರಿಸಿ "ಅಕ್ಕಾ ನೀ ಓದಿದ್ ಸಾಕ್ ನಿನ್ನ ಅತ್ತೆನ ಪರ್ಚಟ ದಿನಂದ ದಿನಕೆ ಜಾಸ್ತಿ ಆಕಂಡ್ ಹೋದೇ. ನಿನ್ನ ದಾರಿಗೆ ಬೇಕದಾಂಗೆ ಯಾರೋಟ್ಟಿಗಾರ್ ಕೇಳಿ ಸಣ್ಣ ಕೆಲ್ಸ ಮಾಡಿಕೊಟ್ಟನೆ ನಿನ್ನ ಅತ್ತೆನ ಒಟ್ಟಿಗೆ ಹೇಳ್ಬಡ. " ಮಾವ ನನ್ನ ಬುಟ್ಟ್ ಹಾಕಿದಂತ ನೆನ್ಸ್‌ಬಡ. ನೀ ಎಲ್ಲಿ ಇದ್ದಿಯ ಅಲ್ಲಿಗೆ ಬಂದ್ ನಿನ್ನ ನೋಡಿಕಂಡನೆ. ಏನ್ ಮಾಡ್ದು ಹೇಳ್ ಅಮ್ಮ ಇದ್ದಿದರೆ ನಿಂಗೆ ಕಷ್ಟ ಇರಿಕಿತ್ಲೆ. ಇಲ್ಲೆ ಮಾವ ನನ್ನ ಅಯ್ಯೆ ಇಲ್ಲದರು ಅಯ್ಯೆನ ಸ್ಥಾನಲಿ ನನ್ನ ಸಾಂಕಿದರಿ ಓದ್ಸಿದರಿ. ಮತ್ತೆ ನೀಮ್ಗೆನು ಭಂಗ. ಮಾವ ನನ್ನ ಅಯ್ಯೆನ ಆಯ್ಸ ಅಷ್ಟ್ ವರ್ಷ ಇತ್ತ್. ನಾ ಎಷ್ಟ್ ವರ್ಷ ಬೊದ್ಕಿನೆಂತ ಹೇಳಿಕಾದ್ಲೆ. ಆ ತರದ ಪರಿಸ್ಥಿತಿ ನನ್ನದಾವುಟುಂತ ಮಾವನ ತೊಬ್ಬಿ ಹಿಡ್ದ್ ಮರ್ಚತ್ತ್.

ಹೆಣ್ಣ್ ತೊವುರು ಮನೆಂದ ಬಾಕೆ ಮುಂದೆ ಬೆಂಗಳೂರು ಕಂಪೆನಿಗೆ ಗೀತನ ಸೇರ್ಸಿದ ಒಂದ್ ವಾರ ಕಳ್ದ ಮೇಲೆ ಕೆಲ್ಸಕೆ ಸೇರಿಕೆ ಹೇಳಿದ್ದ ಕಂಪೆನಿ ಯಜಮಾನ. ಹೆಣ್ಣ್ ತೊವುರ್‌ಂದ ಬಂದ ಮೇಲೆ ಹಿಂದಕೆ ಗಂಡಂಗೆ ಬುದ್ದಿ ಹೇಳಿಕೆ ಸುರು ಮಾಡ್ತ್.

## ಹೊಸ ಬೊದ್ಕು

ಸೊಸೆನ ಕರ್ದ್ ಬುದ್ದಿ ಹೇಳ್ದ ಮಾವ. ಗೀತ ನೀ ಓದಿದ್ ಸಾಕ್ ಏನಾರ್ ಕೆಲ್ಸ ಇದ್ದರೆ ನೋಡಿಕ. ಹೆಣ್ಣ್‌ಗೆ ಕುಸಿನೇ ಕುಸಿ ಓ ಈಗಾರ್ ಇವ್ಕೆ ಬುದ್ದಿ ಬಾತಲಂತ. ಗೀತ ಯಾವ ಉತ್ತರದ ಕೊಟ್ಟತ್ಲೆ. ಹೆಂಗಾರ್ ಒಂದ್ ವಾರನ ಅತ್ತೆನೊಟ್ಟಿಗೆ ಕಳ್ತ್. ಅತ್ತೆ ನಾ ಕಂಪೆನಿಗೆ ಅರ್ಜಿ ಹಾಕಿದೆ ಅರ್ಜೆಂಟಾಗಿ ಸೇರೊಕುಂತ ಬಂದುಟು ಅತ್ತೆ ಏನ್ ಮಾಡೋಕು?

ಮಾಡ್ದೇನ್ ಬೇಡ ಹೋಗಿ ಸೇರಿಕೆ ಆತ್. ಅಂತೂ ನನ್ನ ಹೊರೆಗೆ ಹಾಕಿಕೆನೇ ನೋಡ್ತಾ ಒಳ ನನ್ನ ಮೇಲೆ ಹೆಂಗೆ ಇವ್ಕೆ ಬೇಜಾರ್ ಆದೆ? ಗೀತನ ಮನ್ಸ್‌ಗೆ ಬೇಜಾರ್ ಆಗಿತ್ತ್. ಅಯ್ಯನ ಹಂಗೆ ಸಾಂಕಿದ ಮಾವನ ಮನ್ಸ್‌ಗೆ ಆದ ಬೇನೆನ ಅರ್ಥ ಮಾಡಿಕಂಡಿತ್ತ್. ಗೀತ. ಮಾವ, ಸೊಸೆನ ಕೆಲ್ಸಕೆ ಸೇರ್ಸಿಕೆ ಕರ್ಕೊಂಡ್ ಹೋದ. ನಿಂಗೆ ಏನ್ ಬೇಕು ನಂಗೆ ಹೇಳ್ ಇನ್ನ್ ಕೂಡ ನೀ ನನ್ನ ಸೊಸೆನೆ. ನಂಗೆ ಆಗಾಗ ಬಂದ್ ನೋಡಿಕೆ ಆಗದಿದ್ದರೂ ನನ್ನ ನೆನ್ಪಲಿ ನೀ ಇದ್ದಿಯ. ನಿನ್ನ ಬುಟ್ಟ್ ಹಾಕಿಕಿಲೆ. ಸೊಸೆನ ಮನ್ಸ್‌ಗೆ ಕುಸಿ ಆತ್. ಅಲ್ಲಿಂದ  ಹೊರ್ಟ್ ಬಂದ ಮಾವ.

ಮಾರನೆ ದಿನ ಕೆಲ್ಸಕೆ ಸೇರಿಕಂಡಿತ್. ಗೀತಂಗೆ ಕೊಟ್ಟ ಕೆಲ್ಸಗಳ ಯಾಗೋಳ್ ಕುಸಿಲಿ ಮಾಡಿಕಂಡ್ ಇತ್ತ್. ಒಂದ್ ದಿನ ಮಾಮೂಲ್‌ನ ಹಂಗೆ ಕೆಲ್ಸ ಮುಗ್ಸಿ ಬಾಕನ ಇದರ ಹಿಂದೆ ಇದ್ದ ಹಯ್ದ ಇದರ ಪೊರ್ಲುನ ನೋಡಿ ಕುಸಿ ಪಟ್ಟ್ ಕಂಡಿತ್ತ್. ಅಂದ್‌ಂದ ಗೀತ ಕೆಲ್ಸಕೆ ಹೋಗ್‌ವ ದಾರಿಲಿ ಪಾರ ಕಾದ್ ಕುದ್ರಿಕೆ ಸುರು ಮಾಡ್ತ್. ಗೀತ ಅವನ ಹಕ್ಕಲೆ ಮಾತಾಡದರು ಅವನೇ ಇದರ ಮಾತಾಡ್ಸಿಕೆ ನೋಡ್ತಿತ್ತ್.

ಇವಂಗೆ ಬುದ್ದಿ ಇಲ್ಲೆನ ನನ್ನ ಮನ್ಸ್‌ನ ಹಠ ಹಿಡ್ದ್ ಹಾಳ್ ಮಾಡಿಕೆ ನೋಡ್ದೆ ನಾ ಅವನ ಮೊದುವೆ ಆದರೆ ಅವ ನನ್ನೊಟ್ಟಿಗೆ ಹೆಂಗೆ ಇರ್ದು? ನಾ ಯಾಕೆ ಬೇಕಾಗಿ ಮೊದುವೆ ಆದು? ಮೊದುವೆ ಆದರೆ ನನ್ನ ಕಷ್ಟನ ಹೇಳಿರೆ ಅಂವ ಕೇಳಿಕೆ ಕುದ್ರುದಾ? ಅದ್ ಗಂಡ್‌ಗಳಿಗೆ ಹೆಂಗೆ ಅರ್ಥ ಆದೆ.

ಅವನೊಟ್ಟಿ ಹೆಂಗೆ ಸಂಸಾರ ಮಾಡ್ದು ಮಾಡ್ರೆ ನನ್ನಂದಾಗಿ ಅವಂಗೂ ನನ್ನದೇ ಕಥೆ ಆದೆ. ನಾವ್ಗೆ ನಾಳೆ ಹುಟ್ಟುವ ಮಕ್ಕಳೂ ನನ್ನಾಂಗೆ ಆಗುವ ಮತ್ತೆ ಆ ಕಷ್ಟನ ಯಾವ ಕಣ್ಣ್‌ಲಿ ನೋಡ್ದು.

ಮಾವಂಗೂ ಇಷ್ಟ್ ಸಮಯ ನನ್ನ ಕಥೆ ಗೊತ್ಲೆ. ಇನ್ನ್ ಇವನೊಟ್ಟಿಗೆ ಹೇಳಿರೆ ನಾಳೆ ಇಡೀ ಜನಕೆ ಗೊತ್ತಾಗಿ ಎಲ್ಲವು ನನ್ನ ಕಡೆ ಕಣ್ಣ್‌ಲಿ ನೋಡಿ ಕಂಡ್ ಹೋಗಿ ಯಾರೂ ನನ್ನ ಒಟ್ಟಿಗೆ ಸೇರಿಕಿಲೆ. ಅಂದ್ ಆದಿತ್ಯವಾರ ರಜೆ ದಿನ ಎಲ್ಲ ಕಥೆಗಳ ನೆನ್ಸಿಕಂಡ್ ಕುದ್ದ ಗೀತನ ಮೊರೆ ಬಾಡಿ ಹೋಗಿತ್ತ್. ವಿಜಯನ ಆಫೀಸ್‌ಗೆ ರಜೆ ಆದರ್‌ಂದ ಅಂದ್ ಅದೇ ಹೋತ್ತ್‌ಗೆ ಗೀತನ ಮನೆಗೆ ಹೋಗಿತ್ತ್. ಅವಳ ಅವಸ್ಥೆನ ನೋಡ್ದ ವಿಜಯ್.

ಯಾಕೆ ಗೀತ ಮರ್ಡ್ತ ಒಳ? ನಿಂಗೆ ಏನಾತ್! ಗೀತ ಕುದ್ದಲಿಂದ ಮೊಸಿಗಿತ್ಲೆ.

ಮೊರ್ಪ್ಕಂಡೆ ಇತ್ತ್. ಅದರ ಕೈ ಹಿಡ್ದ್ ಎದ್ರಿಸಿತ್ ಅದರ ಅವನ ಹಕ್ಕಲೆ ಕುದ್ರಿಸಿ ಮರ್ಡುದು ಯಾಕೆ? ಹೇಳಿಕಾದ್ಲೆನ ನಿಂಗೆ ಬಾಯಿ ಬುಟ್ಟತ್ಲೆ. ಮಾತಾಡ್ದುಲೆನ ಕೋಪನ ಬಾಯಿ ಬುಟ್ಟ್ ಹೇಳಿರೆ ತಾನೇ ನಿಂಗೆ ಏನಾವುಟು ಏನ್ ಎಂಥಂತ ಗೊತ್ತಾದು ಹೇಳ್ ಅದ್ಕೆ ಬೇಕಾದ ಪರಿಹರಗ ಏನಾರ್ ಇರ್ದು ಮರ್ಪ್ಕಂಡ್ ಕುದ್ದ್‌ರೆ ಹೆಂಗೆಂತ ಅರ್ಥ ಮಾಡಿಕಂಬದು. ಒಮ್ಮೆ ಅವನ ಮೋರೆ ನೋಡ್ತ್‌ಷ್ಟೆ ಗೀತ. ಏನ್ ನಿಂಗೆ ಬಾಯಿ ಬಾದ್ಲೆನ? ಆಚೆ ಬೆನ್ನ್‌ಲಿ ಹಂಞ ಈಚೆ ಬೆನ್ನಲಿ ಹಂಞ ಹರಂಡಿ ಕಂಡ್ ಇದ್ದ ಕೂದೋಲು ಅದರ ಕಣ್ಣ್‌ಂದ ಅರ್ದ ನೀರ್ ಕೆನ್ನೆಲಿ ಇಳ್ದ್ ಹುರಿ ಗಟ್ಟಿದ ಕೂದೋಲು ಕೊಡೀಲಿ ನೆಲಕೆ ಇಳೆತಿತ್ತ್ ತುಟಿ ದೆರ್ಪಿಕೆ ಸುರು ಆಗಿ ಗಂಟ್ಲ್ ಕಟ್ಟಿ ಹೋಗಿ ದೊಂಡೆಂದ ಸೊರ ಹೊರ್ಪತ್ಲೆ .

ಇದರ ಅವಸ್ಥೆನ ನೋಡಿ ಸಿಟ್ಟ್ ಬಂದ ವಿಜಯ ಹಂಗೆ ಬೆನ್ನ್ ಹಾಕಿ ಹೋತ್. ಮಾರ್ನೆ ದಿನ ಗೀತ ಮೊಂದ್ರಿಂದ ಎದ್ರಿಕೆ ಮುಂದೆ ಅದರ ಮನೆ ಜಾಲ್‌ಲಿ ಜೋರ್ ಮಾತಡ್ದ ಸೊರ ಕೇಳ್ತ್. ಗೀತಂಗೆ ಅಚ್ಚರಿ ಆತ್. ಮೊಂದ್ರಿಂದ ಮೆಲ್ಲ ಎದ್ದ್ ಹೋಗಿ ಕಿಡ್ಕೆಲಿ ನಿಲ್ಕಿ ನೋಡ್‌ಕನ ಅದರ ಸೋದರ ಮಾವನೊಟ್ಟಿಗೆ ಇಬ್ಬೊರು ನಿತ್ತ್‌ಕಂಡ್ ಇದ್ದ ಎಲ್ಲಿಗೋ ಹೋಗೊವು ಗೀತನ ಮತಾಡ್ಸಿ ಹೋಕೆ ಬಂದಿದ್ದ. ಇವು ಬಂದ್ ಹಂಞ ಹೊತ್ತ್‌ಲಿ ವಿಜಯನು ಇದರ ಮನೆಗೆ ಬಂದಿತ್ತ್. ಈಗ ಇದ್ಕೆ ಹೆದ್ರಿಕೆ ಆತ್. ಗೀತನ ಇಷ್ಟಪಟ್ಟ್‌ಕಂಡ್ ಇದ್ದ ಸಂಗತಿನ ಅಂದೇ ಅವನ ಬಾಯಿಂದ ತಿಳ್ಕಂಡಿದ್ದ ಅದರ ಸೋದರ ಮಾವ.

ಅವನ ಮನ್ಸಿಗಾತ್ ನಾ ಬಂದ ಹೊತ್ತು ಸರಿ ಉಟ್ಟು ನಮ್ಮ ವಿಷಯ ಇಂದೇ ತಿರ್ಮಾನ ಆಕು. ಅವನ ಆಸೆಗಳ ಅದರ ಸೋದರ ಮಾವನೊಟ್ಟಿಗೆ ಹೇಳ್ತ್. ಗೀತ ಅದರ ಸಂಕಟನ ಹೇಳಿಕಾಗದೆ ಇವರ ಮಾತುಗಳ ಕೇಳಿಕಂಡ್ ಅಲ್ಲೆ ಗೋಡೆಗೆ ಒರ್ಗಿ ನಿತ್ತ್ ಇವರ ಮಾತುಗಳ ಕೇಳ್ಸಿಕಂಡ್ ಛೆ ಇವ್ಕೆ ನನ್ನ ಕಾಯಿಲೆನ ಹೇಳಿರೆ ಏನಾದು? ಇನ್ನ್ ಹೇಳಿರೂ ಏನೂ ಮಾಡ್ಲಿಕಾದೆ. ಕೈಗೆ ಬಂದರೆ ಬಾಯಿಗೆ ಬಾದಾ? ನೆನ್ಸಿದ ಗೀತ ಸುಮ್ಮನಾಕಣ್ತ್.

ಇನ್ನ್ ಬೊದಿ ಕೊಟ್ಟವೆಂತ ಹೇಳಿರೆ ಹಯ್ದಂಗ ಸಾಲ್ ಸಾಲಾಗಿ ಒಳ. ನಾವ್ಗೆ ಅಂತೊವು ಬೇಡ. ಹೆಂಗು ನಿಮ್ಮ ಜೀವನ ನಡ್ಸಿಕೆ ತಕ್ಕ ನಾ ಕಲ್ತ್ ವಿದ್ಯೆ ಉಟ್ಟು ನಾಲ್ಕುರೂ ಮೊಣ್ಣು ಉಟ್ಟುಂತ ಹೇಳ್ದಂಗೆ ನೀವು ಮಾಡಿಕಂಡ್ ಇದ್ದ ಕೆಲ್ಸಗ ನೀವ್ಗೆ ಸಾಕ್ ನೀವ್ಗೇನ್ ಕಷ್ಟ ಇಲ್ಲೆ ಇಬ್ಬರ ಮನ್ಸ್ ಒಂದಾಗುವ ಹಂಗೆ ಹೇಳಿ ಅದರ ಮಾವ ಹೋದ.

ಮನೆಗೆ ಹೋದ ವಿಜಯನ ಕುಸಿಗೆ ಲೆಕ್ಕನೇ ಇಲ್ಲದಾಂಗೆ ಆತ್ ನನ್ನ ಆಸೆ ಈಡೇರ್ತ್. ಯಾಗೋಳು ಕಾಣದ ಕುಸಿನ ಕಂಡ್‌ಕಂಡ್ ಗೀತಂಗೆ ಫೋನ್ ಮಾಡಿ ಇನ್ನ್ ನಮ್ಮ ಮೊದುವೆಗೆ ಎರಡೇ ತಿಂಗ ಒಳದ್ ತುಂಬ ಆಡಂಬರದ ಮೊದುವೆ ಬೇಡ. ಮೊಂದ್ರಿ ಇದ್ದಾಂಗೆ ಕಾಲ್ ನೀಂಡಿರೆ ಸಾಕ್ ಇನ್ನೊಂದಿನ ಬನ್ನೆಂತ ಹೇಳ್ತ್ ವಿಜಯ್.

## ಹೊಸ ಬೊದ್ಕು

ಒಮ್ಮೊಮ್ಮೆ ಕುಸಿ ಒಮ್ಮೊಮ್ಮೆ ಬೇಜಾರ್ ಆಕಂಡ್ ಇತ್ತ್ ಗೀತನ ಮನ್ಸ್ಸಲಿ. ಏನ್ ಬೆಕಾರೂ ಆಗಲಿ ವಿಜಯ ಕುಸಿಲಿ ಉಟ್ಟು ನಿಜವಾಗಿ ಅವ ಒಳ್ಳೆವನೆ ನನ್ನ ಒಳೆಗೆನ ಪರಿಸ್ಥಿತಿ ಅವಂಗೆ ಗೊತ್ಲೆ.

ಮೊದುವೆ ಕ್ರಮ ಪ್ರಕಾರ ನಡ್ತ್ ಗಂಡ ಹೆಣ್ಣಾಗಿ ಇದ್ದೊವು ಇಷ್ಟ್ ದಿನ ಒಂದಾಗದೆ ಯಾರ್ ಇದ್ದವೆ.? ಮೊದುವೆ ಆಗಿ ಮೂರು ವರ್ಷ ಮುಟ್ಟ ನಾವು ಹಕ್ಕಲೆ ಮಲ್ಗಿಕೆ ಆಗ್‌ದತ ಹೇಳ್ದೆ. ಅದ್ಕೆ ಒಪ್ಪಿಕಂಡತ್ ಮೊದುವೆ ಆಗಿ ವಿಜಯಂಗೆ ಜೀವನಲಿ ಯಾವ ಸುಖ ಉಟ್ಟು ಬೇರೆ ಗಂಡಂದರ್ ಆಗಿದ್ದರೆ ಹೆಣ್ಣ್‌ನ ಮಾತ್‌ಗಳ ಎಲ್ಲಿ ಲೆಕ್ಕಕ್ಕೆ ತಕಂಡವೆ. ಅವರ ಕಷ್ಟ ಯಾರಿಗೆ ಅರ್ಥ ಆದೆ. ಗಂಡನೊಟ್ಟಿಗೆ ಗೀತನ ಕಾಯಿಲೆನ ಹೇಳಿಕಾತ್ಲೆ. ಮೊದುವೆ ಆಗಿ ಎರಡ್ ವರ್ಷ ಕಳ್ದ್ ಮೂರು ವರ್ಷ ಆಕಂಡ್ ಬಾಕಾನ ಇನ್ನ್ ಇವ್ಕೆ ಹೆಂಗಾರ್ ಮಾಡಿ ಬೇರೆ ಮೊದುವೆ ಮಾಡ್ಸೋಕುಂತ ನೆನ್ಸಿಕಂಡ ಗೀತ ವಿಜಯನ ಒಟ್ಟಿಗೆ ಸರಿ ಮಾತಾಡದೆ ಅವಂಗೆ ಉಂಬಕೆ ತಿಂಬಕೆ ಸರಿ ಆದ ಹೊತ್ತಿಗೆ ಮಾಡಿಕೊಡ್‌ತಿಲ್ಲೆ. ವಿಜಯಂಗೆ ಇದ್ ನಡಿವ ನಡತೆ ಸರಿ ಇಲ್ಲದರು ಒಂದ್ ಬೇಡದ ಮಾತುಗಳ ಹೇಳದೆ. ಅದ್ಕೆ ಸರಿ ಆಗಿ ಅವನೂ ನಡೆತ್ತಿತ್ತ್. ಇವರ ಇಷ್ಟ್ ಬಂಗ ಬರ್ಸಿರೂ ನನ್ನ ಮೇಲೆ ಇವ್ಕೆ ಯಾವ ಅನುಮಾನ ಇಲ್ಲೆ ಛೆ! ನಾ ಹಿಡ್ಡ ಹಠ ಸುಮ್ಮನೆ. ಬೇರೆ ಮಲ್ಗಿದ ಹೆಣ್ಣ್‌ನ ಕೊಂಬರೆಗೆ ಹೋಗಿ ನಿಲ್ಕಿ ನೋಡಿ ಹಂಗೆ ಬಂದ್ ಮಲ್ಗ್‌ತ್ತಿದ್ದದ್ ಕೂಡ ಗೀತಂಗೆ ಗೊತ್ತಿತ್ತ್.

ಈಗ ನಿಜವಾಗಿ ಇದರ ಕಾಯಿಲೆ ಜಾಸ್ತಿ ಆಗಿ ಹುಚ್ಚರ ಹಂಗೆ ಮಾಡಿಕೆ ಸುರು ಮಾಡ್ತ್. ಒಂದ್ ದಿನ ಮಲ್ಗಿದಲ್ಲಿಂದ ಎದ್ರಿಕೆ ಆಗದ ಗತಿ ಅದ್ಕೆ ಬಾತ್ ಕೆಮ್ಮುಲು ಜರ ಜೋರ್ ಆತ್. ವಿಜಯ ಅದರ ಆಸ್ಪತ್ರೆಗೆ ಕರ್ಕಂಡ್ ಹೋಗಿತ್ತ್. ಇದರ ಹಕ್ಕಲೆ ವಿಜಯ ಕುದ್ದಿತ್. ಇಬ್ಬೊರ್ ಡಾಕ್ಟರ್‌ಗ ಪರೀಕ್ಷೆ ಮಾಡಿ ನೊಡ್ಡ.

ಅವೆಲ್ಲ ಯಾದೋ ಒಂದ್ ಆಲೋಚನೆಲಿ ತಿರ್ಮಾಕೆ ಬಂದಿದ್ದ ಅದರ ರಕ್ತನ ಪರೀಕ್ಷೆಗೆ ತಕಂಡ್ ಹೋಗಿ ಪರೀಕ್ಷೆ ಮಾಡ್ದ ವಿಜಯಂಗೆ ಗೊತ್ತಾಗದ ಯಾದೋ ವಿಷಯ ಅವನ ಮನ್ಸ್‌ಗೆ ಬೇನೆ ಮಾಡ್ತ್. ಅಲ್ಲೆ ಹಕ್ಕಲೆ ಕುದ್ದ ವಿಜಯನ ನೋಡಿ ಡಾಕ್ಟರ್ ಕೇಳ್ದ "ನೀವ್ಗೆ ಇವು ಸಂಬಂದನ?" "ಹೌದು." " ನಾವ್ಗೆ ಅವರ ವಿಷಯ ಹಂಞ ಕೇಳಿಕೆ ಉಟ್ಟು ಹೇಳಿರಲಾ?" "ಯಾದರ ಬಗ್ಗೆ" ಡಾಕ್ಟ್ರ್ ಗೀತನ ಮೋರೆ ನೋಡಿ "ಆಫೀಸ್ ಒಳಗೆ ಬನ್ನಿ" ಡಾಕ್ಟರ್ ಮಾತ್ ಕೇಳಿ ವಿಜಯ ಅವರ ಬೆನ್ನ್ ಹಿಂದೆ ಹೋಗಿ ಅವರ ಹಕ್ಕಲೆ ಕುದ್ದತ್. "ಗೀತ ನಿವ್ಗೆ ಏನಾಕು? " "ಅವು ನಂಗೆ" ವಿಜಯಂಗೆ ನಾಲಿಕೆ ತಡ್ರ್‌ಸಿತ್ "ಏನ್ ನೀವು ಅವರ ಒಟ್ಟಿಗೆ ಬಂದೊಳರಿ ಹೇಳಿಕೆ ಯಾಕೆ ಹಿಂದೆ ಮುಂದೆ ನೋಡಿರೆ. ನಾವು ಮಾಡ್ದ ಮೊದ್ದು ಅವ್ಕೆ ಸರಿ ಹಿಡಿಯೋಕುಂತಾದರೆ ಅವರ ಹಿಂದೆನ ಕಥೆ ನಾವ್ಗೆ ಗೊತ್ತ್ ಬೇಕು. ॥ ನನ್ನ ಹೆಣ್ಣ್ ನಮ್ಮ ಊರುಲಿ ಕೆಲ್ಸಕೆ ಸೇರಿತ್ ಈಗ ಮೊದುವೆ ಆಗಿ

## ಹೊಸ ಬೊದ್ಕು

ಮೂರು ವರ್ಷ ಆತ್.

ಅಂದರೆ ಇವರ ಪರ್ಚಯ ಆಗಿ ಎಷ್ಟು ವರ್ಷ ಆತ್. "ಇವರ ಮನೇವು ಬೇರೆ ಯಾರ್ ಇಲ್ಲೆನ? ನಾ ಅದರ ಪರ್ಚಯ ಮಾಡಿಕಂಡ್ ಒಂದ್ ವರ್ಷ ಆದ ಮೇಲೆ ಮೊದುವೆ ಆದೆ. ಅದರ ಅಪ್ಪ ಅದ್ ಸಣ್ಣ ದಿರ್‌ಕನ ಸತ್ತ್ ಹೋಗುಳ. ಅಯ್ಯೆಗೆ ಅಷ್ಟ್ ಪ್ರಾಯ ಆಗದೆ. ಜರ ಕೆಮ್ಮುಲು ಜೋರ್ ಆಗಿ ಎಡೆ ಪ್ರಾಯಲಿ ಸತ್ತ್ ಹೋದ್‌ಂತ ಅದರ ಬಯಿಂದ ಕೇಳಿಕಂಡಿದಿಷ್ಟೆ. ಸೋದರ ಮಾವ ಸಾಂಕಿಕಂಡ್ ಇದ್ದ್ ನಂಗೆ ಮೊದುವೆ ಮಾಡ್ಸಿದ . "ನೀವ್ಗೆ ಮಕ್ಕ ಎಷ್ಟ್". ಇಲ್ಲೆ ಮಕ್ಕ ಆತ್ಲೆ ಮೊದುವೆ ಆಕೆ ಮುಂದೆನೆ ನನ್ನ ಒಟ್ಟಿಗೆ ಹೇಳಿತ್ತ್ ನಾವು ಮೊದುವೆ ಅದರೆ ಮೂರು ವರ್ಸದ ವರೆಗೆ ನಾವಿಬ್ಬೊರ್ ಒಟ್ಟಿಗೆ ಸೇರಿಕೆ ಆಗದ್. ಅಂದರೆ ಮಾತ್ರ ನಾ ಮೊದುವೆಗೆ ಒಪ್ಪಿನೆಂತ ನಮ್ಮ ಮೊದುವೆ ಆಗಿ ಈಗ ಮೂರನೇ ವರ್ಸ ಇನ್ನ್ ಆಕಷ್ಟೆ ಎಷ್ಟ್ ಕಾಲಂದ ಇವು ಈತರ ನಡ್ಕ್ಂಡ " ನಾ ಇದರ ಮೊದುವೆ ಆಕೆ ಅದರ ಒಟ್ಟಿಗೆ ಕೇಳ್ದೆ ಮೇಲೆ. ಅದ್ಕೆ ಮನ್ಸ್ ಇತ್ಲೆ . ಈಗ ಒಂದ್ ವರ್ಷಂದ ಇದರ ಕಥೆ ಜೋರಾದ್." "ಸರಿ" ಡಾಕ್ಟರ್‌ಗ ಅವರವರ ಕೆಲ್ಸಗಳ ಮಾಡಿಕಂಡ್ ಅವವೇ ಅವರಿಷ್ಟಕೆ ಏನೇನೋ ಹೇಳಿಕಂಡ್ ನೆಗಾಡಿಕೆ ಸುರು ಮಾಡ್ದ. ವಿಜಯ ಡಾಕ್ಟರ ಕೊಂಬರೆಂದ ಹೊರಗೆ ಬಾಕನ ಇವರ ನೆಗೆನ ಕಂಡ್ ಏನೋ ಸಂಸಯ ಬಂದ್ ನೆಗೆ ಎದುರು ಕಂಡಾಂಗೆ ಆಗಿ ಎದೆಗೆ ಬೀಸ್ ಕತ್ತಿ ಹಾಕಿದಂಗೆ ಆಗ್ತಿತ್ತ್.

ಅವನ ಬೇಜಾರನ ಹೇಳಿಕಾಗದೆ ಗೀತನ ಹಕ್ಕಲೆ ಬಂದ್ ಕುದ್ದಿತ್ ವಿಜಯ್. ಗೀತ ನಿದ್ದೆ ಮಾಡಿತ್ತ್. ಅದರ ಮೋರೆ ನೋಡಿ ಓ ಇದ್ಕೆನಾ ಇಷ್ಟ್ ನನ್ನ ಮೇಲೆ ಹಠ ಹಿಡ್ದದ್. ಯಾವ ಕಾಯಿಲೆಂತ ಡಾಕ್ಟರ್ಗ ಕಂಡ್ ಹಿಡಿಯಕೆ ಆಗದ ಕಾಯಿಲೆಲಿ ಒಳಂತ ನಂಗೆ ಗೊತ್ತಿತ್ಲೆ. ಅಂದೇ ಹೇಳಿದರೆ ಹೆಂಗಾರ್ ಬೊದ್ಕುತ್ತಿದ್ದ. ಇದರ ಲೆಕ್ಕಕೆ ತಕಣದೆ ನಮ್ಮ ಸಂಸಾರ ಬೆಳ್ಗುವ ಹೊಕ್ಕಳು ಬೊಳ್ಳಿತ ನಿನ್ನ ಮನ್ಸ್‌ನ ಮುಟ್ಟಿದೆ. ಆದ್ರೆ ಅದ್ ಇಂದ್ ಸಾವುನ ತಕಂಡದೆ. ಒಂದ್ ವೇಳೆ ನೀ ನನ್ನ ಬುಟ್ಟ್ ಹೋದರೆ ನಾ ಹೆಂಗೆ ಇರ್ದು. ಯಾಕೆ ಬೇಕಾಗಿ, ಯಾರಿಗೆ ಬೇಕಾಗಿ ನಾ ಬೊದ್ಕುದು ಇಷ್ಟರವರೆಗೆ ಯಾಗೋಳ್ ನನ್ನ ಮನ್ಸ್‌ಗೆ ನೀನೆಂತ ನೆನ್ಸಿದೆ.

ಈಗ ಅದ್ ಸಾದ್ಯನ? ಯಾವ ಕಡೆ ತಲೆ ಓಡ್ಸಿರು ಅವಂಗೆ ಯಾವುದ್ ಅರ್ಥ ಆಗ್ತಿತ್ಲೆ. ಮಾರ್ನೆ ದಿನ ಹತ್ತ್ ಗಂಟೆಗೆ ಡಾಕ್ಟ್‌ರ್‌ಗ ಬಂದಿದ್ದ. ಅವರ ಮಾತ್‌ಗಾಗಿ ಅರ್ಧ ಗಂಡೆ ಕಾಯಕ್ಕಾಗಿತ್ತ್. ಕಡೆಗೊಮ್ಮೆ ಡಾಕ್ಟ್‌ರ್ಗಳ ಕೊಂಬರೆಗೆ ವಿಜಯನ ಕರ್ಸಿದ.

ಗೀತನ ಕಾಯಿಲೆಗಳಿಗೆ ಸಂಬಂದ ಪಟ್ಟ ಮೊದ್ದುಗಳ ಡಾಕ್ಟರ್‌ಗ ಕಟ್ಟುತ್ತಿದ್ದ. ಏನಾದುಂತ ಕೇಳ್ನೆಂತ ವಿಜಯ ಬಾಯಿ ತೆಗೆಕೆ ಮುಂದೆ ಅವೇ ಹೇಳ್ದ. "ನಾವ್ಗೆ ಮುಂದೆನೆ ಗೊತ್ತಿತ್ತ್. ಯಾವ ಕಾಯಿಲೆಂತ ಈ ಕೇಸಗೆ ಮೊದ್ದು ಮಾಡಿ ಯಾವ ಪ್ರಯೋಜನ ಇಲ್ಲೆ." "ಅಂದರೆ ಏನಾದು?" "ಅಗತ್ಯ ಇಲ್ಲೆಂತ ತೀರ್ಮಾನಕೆ ಬಂದಳ" ವಿಜಯಂಗೆ ಅಚ್ಚರಿ ಆತ್

"ಅಂದರೆ" ಅವ್ಕೆ ಕಾಯಿಲೆ ಮೀರಿ ಹೋಗಿ ರಕ್ತ ಕೊಟ್ಟರೂ ಶರೀರ ತಕಂಬಲೆ " " ಅಂದರೆ ಇನ್ನೆಂತ" "ಮನೆಗೆ ಕರ್ಕ್ಂಡ್ ಹೋಗಿ. ಇಲ್ಲಿ ನಿಲ್ಸಿಕಂಡ್ ಪ್ರಯೋಜನ ಇಲ್ಲೆ.

ಮದ್ಯಾನ ಆಕನ ಗೀತನ ಕರ್ಕ್ಂಡ್ ಮನೆಗೆ ಹೋತ್. ಗೀತಂಗೆ ಡಾಕ್ಟ್ರ್ ಹೇಳ್ದ ಕಾಯಿಲೆ ಅಂದೇ ಗೊತ್ತಿತ್ತ್. ವಿಜಯಂಗೆ ಡಾಕ್ಟ್ರೇ ಹೇಳಿದ್ದ ಏಡ್ಸ್‌ಂತ ಆದರೆ ಅದರ ಒಟ್ಟಿಗೆ ಇವ ಬಾಯಿ ಬುಟ್ಟತ್ಲೆ. ವಿಜಯನ ಮನ್ಸ್‌ಲಿ ಹೇಳಿಕಾಗದ ಕುಸಿ ಅಂದ್ ಕೊಣೆತ್ತಿದ್ದರೆ ಇಂದ್ ಬೇಜಾರ್‌ಲಿ ಕುದ್ರಿಕೆ ಆದರ ನೋಡ್ದ ಗೀತ ಅದರ ನಿಜ ಸಂಗತಿನ ಹೇಳ್ತ್.

ಅಂದ್ ನನ್ನ ಅಪ್ಪ ಬಸ್ ಡ್ರೈವರ್ ಆಕಂಡ್ ಇದ್ದ ಅವರ ಕೈ ತೊಪ್ಪಿ ಹೋಗಿ ಹೊಂಡಕೆ ಬಿದ್ದ ಅಪ್ಪನ ಯಾರೋ ಗುರ್ತು ಇಲ್ಲದವು ಆಸ್ಪತ್ರೆಗೆ ಸೇರ್ಸಿದ ಅಪ್ಪನ ಬೊದ್ಕುಸುವ ಅರ್ಜೆಂಟ್‌ಲಿ ಯಾರ್ದೊ ರಕ್ತ ತಕಂಡ್ ಡಾಕ್ಟ್ರ್‌ಗ ಅಪ್ಪನ ಜೀವನ ಉಳ್ಸಿದ. ಮತ್ತೆ ಒಂದ್ ವರ್ಷ ಆಕನ ನಾ ಹುಟ್ಟಿದೆ. ಅಪ್ಪಂಗೆ ಕಾಯಿಲೆ ಜೋರ್ ಆಗಿ ತೀರಿ ಹೋದ. ನಾ ಹುಟ್ಟಿ ಐದ್ ವರ್ಷ ಆಕನ ನನ್ನ ಅಮ್ಮಂಗೆ ಜರ, ಕೆಮ್ಮಲು ಉಬ್ಬಸ ಜೋರ್ ಆತ್ ನನ್ನ ಮಾವ ಅಸ್ಪತ್ರೆಗೆ ಅಮ್ಮನ ಕರ್ಕ್ಂಡ್ ಹೋಕನ ಅರ್ಧ ದಾರೀಲೇ ತೀರಿ ಹೋದ. ಅವರ ಕಾಯಿಲೆ ಯಾರಿಗೂ ಗೊತ್ತಾತ್ಲೆ. ಅದೊಂದ್ ದಿನ ನಂಗೂ ಜರ ಬಂದಿತ್ತ್. ನಾನೇ ಆಸ್ಪತ್ರೆಗೆ ಹೋದೆ. ನನ್ನ ಪರೀಕ್ಷೆ ಮಾಡ್ದ ಚೀಟ್‌ಲಿ ಏಯಿಡ್ಸ್ ಕಾಯಿಲೆ ಉಟ್ಟುಂತ ನಂಗೆ ಗೊತ್ತಾತ್.

ನಾ ಯಾರಿಗೂ ಈ ವಿಷಯನ ಹೇಳ್ಲೆ. ಹೇಳಿ ಎಲ್ಲವುಕ್ಕೂ ಗೊತ್ತಾದರೆ ನಂಗೆ ಇನ್ನಷ್ಟ್ ಹಂಗ್ ಇರ್ದುಂತ ಸುಮ್ಮನಾದೆ. ನಿಮ್ಮ ಮೊದುವೆ ಆದರೆ ನಾಳೆ ಮಕ್ಕ ಆದವೆ ಮಕ್ಕಳಿಗೆ ಆದೇ ಕಾಯಿಲೆ ಬಾದುಂತ ನನ್ನ ಮನ್ಸ್ ಹೇಳ್ತ್ ಅದ್ಕೆ ಬೇಕಾಗಿ ನಿಮ್ಮ ಕೈಂದ ಬಾಷೆ ತಕಂಡೆ.ಮೊದುವೆಗೆ ಒಪ್ಪದಿದ್ದರೆ ನಾ ಸತ್ತನೆಂತ ನನ್ನ ಒಟ್ಟಿಗೆ ನೀವು ಹೇಳ್ದರ್‌ಂದ ಮದುವೆಗೆ ಒಪ್ಪಿದೆ. ನನ್ನಂದಾಗಿ ನಿಮ್ಮ ಜೀವನ ಹಾಳಾಕೆ ಆಗದ್ ಹೇಳಿಕಂಡ್ ಇದ್ದಾಂಗೆ ಅವನ ಕೈಲೀ ಅದರ ಉಸುರ್ ನಿತ್ತ್ ಹೋತ್. ಬಾಯಿ ಬುಟ್ಟುಕಂಡ್ ಇದ್ದ ವಿಜಯ ಹುಚ್ಚರಾಂಗೆ ನಿತ್ತಿತ್ತ್.

* * * * * *

# ಕಟ್ಟಿದೆಲ್ಲ ಕನ್ಸ್ ಅಲ್ಲ

ನೇಚಿ ಬಿಗ್ದ್ ಕಟ್ಟಿದ ರಬಸಲಿ ಪಾಣೆ ಮಂಗ್ಲೂರು ಎತ್ತಿರು ಪಂಚೆ ಬಿಚ್ಚಿತ್ತೆ. ಬಾಳೆಲೆಲಿ ಕಟ್ಟಿದ ಹಂದಿ ಗೈಪು ಪುಂಡಿನ ಅಲ್ಲೆ ಕರೆಲಿ ಇಸಿ ಕೈಕಾಲ್ ಮೋರೆ ತೊಳ್ಕಂಡ್ ಬಂದ ದನಿಗ ಬುತ್ತಿನ ಬುಡ್ಸಿ ನೋಡ್ಕನ ಮೂಕುಗೆ ಗಮ್ಮ ವಾಸನೆ ಹೊಡಿಯಕೆ ಸುರು ಆತ್. ನರ್ಕ ಹಾಳಾಗಿ ಹೋಗಲಿ ಈ ಬುತ್ತಿನ ಇನ್ನ ಹೆರ್ಕಿ ಮಾರ್ಗಕ್ಕೆ ಹೊಡಿಯಕಷ್ಟೆ.

ಇಟ್ಟರೆ ಯಾರಾರ್ ನೋಡಿರೆ? ನಾಯಿಗಾರ್ ಕುಸಿಲಿ ತಿಂಬ. ಮೊನ್ಸರ್ ನೋಡಿರೆ ದಂಡ ಕಟ್ಟಿಕೆ ಆದು ಏನು ಮಾಡುವ ದಾರಿಂತ ದನಿಗ ಹೊರಗೆ ಬಂದ್ ಯಾರಾರ್ ನೋಡುವೆನಾಂತ ಒಂಟಿ ಕಾಲ್‌ಲಿ ನಿತ್ತ್ ಕೊಟ್ಟಾನ್ ಕೊಡಿವರೆಗೆ ನಿತ್ತ್ ನೋಡ್ದ.

ದನಿಗಳಿಗೆ ಹಂಞ ಚಳಿ ಕುದ್ದಿತ್. ಕಿಚ್ಚಿ ಬೊಡ್ದ್ ಹೋಗಲಿತ ದಟ್ಟಿ ಕಟ್ಟಿದ ಪಂಚೆ ಕೊಡಿಲಿ ಕೊಂಬ ಮೀಸೆನ ಉಜ್ಜಿಕಂಡ.

ಛೆ ಈ ಪುಂಡಿನ ಸುಟ್ಟ್ ಹೋಗಿತ್ತ್. ಗೈಪುನ ಹೆಂಗೆ ಇಡ್ದು ಮನ್ಸ್ ಕೇಳದೆ ನೀರ್ ಅರ್ನಿಕಂಡ್ ಹಳ್ಸೆಲೆ ಗೈಪುನ ತಿಂಬಕೆ ಸುರು ಮಾಡ್ದ.

ಇದರ ಸಾವುಗೆನ ಇದ್? ಒಂದ್ ಚೂರ್ ಬೆಚ್ಚ ಮಾಡಿ ಕೊಟ್ಟಿದ್ದರೆ ಏನಾಗಿತ್ತ್.? ಅದ್ಕೆ ಬೇಕದಾಂಗೆ ಬೆಚ್ಚ ಮಾಡಿಕಂಡ್ ಹುಳ್ಳಂಗೆಲಿ ದೊಂಡೆಗೆ ಇಳ್ಸಿಕಂಡದೆ. ಹೆಣ್ಣ್‌ಗೆ ಬೊಯ್ಕಂಡ್ ಬೊಯ್ಕಂಡ್ ತಿಂದ ಗೈಪ್ ಮುಗ್ದದ್ ದನಿಗಳಿಗೆ ಗೊತ್ತಾತ್ತೆ.

ನಿ ಮೊಣ್ಣ್ ತಿಂದೇ ಹೋಗ್ ಬಲತ ಅಲ್ಲೆ ಮೊಂದ್ರಿ ಹಾಕಿ ಮಲ್ಗಿದ. ಮೊರ್ದಿನ ಆಫೀಸ್‌ಲಿ ಕೆಲ್ಸ ತುಂಬ ಇತ್ತ್ ಎಲ್ಲವುರ್‌ಂದ ಮುಂದೆ ಹೋಗಿ ಕೆಲ್ಸ ಸುರು ಮಾಡ್ದ. ಅವರ ಒಟ್ಟಿಗೆ ಕೆಲ್ಸ ಮಾಡೊವು ಎನ್ ಮೇದಣ್ಣ ಇಂದ್ ನೀವ್ಗೆ ಬಾರಿ ಬೇಗ ಬೊಳ್ಬು

ಆವುಟು ಮನೆಂದ ಏನಾರ್ ಗಮ್ಮತ್ತ್ ತಂದೊಳೊರಿನ ಅವರ ಪ್ರಶ್ನೆಗಳಿಗೆ ದನಿಗ ಮೂಕುನ ಗಾಳಿ ಹೊರೆಗೆ ಹಾಕಿತ್ಲೆ.

ಮತ್ತೊಮ್ಮೆ ದನಿಗ ಮನೆಗೆ ಹೋಕನ ಮಳ್ಗಲ ಸುರು ಆಗಿತ್ತ್. ಗದ್ದೆಕೆಲ್ಸ ಬೇಸಾಯ ಸುರು ಮಡುವ ಸಮಯ ಆಗಿದ್ದರ್‌ಂದ ಹದ್ನೈದ್ ದಿನ ರಜೆ ಹಾಕಿ ಊರ್‌ಗೆ ಹೊರ್ಟ್.

ಬಿಳ್ಗ್‌ಲ್ ಅಟ್ಟದ ಪೊರಿಲಿ ಇಸಿದ ನೋಜ ನೇಗೆಲ್‌ನ ತೆಗ್ದ್ ಆಳ್‌ಗಳ ಕರ್ಸಿ ಕೆಂಪಾಣು ಬೆಳ್ಳಾಣು ಎತ್ತ್‌ಗಳ ಹೂಟೆಗೆ ಕರ್ಕಂಡ್ ಹೋದ. ನೇಜಿ ನಾಟಿ ಸುರು ಆತ್. ದನಿಗಳ ಮನೆಗೆ ಮಾಮೂಲಿ ಕೆಲ್ಸಕೆ ಬರುವ ಆಳ್‌ಗಲ್ಲಿ ಮಾನ ತೇಳವನ ಒಟ್ಟಿಗೆ ಧನಿಗಳಿಗೆ ತುಂಬಾ ಕುಸಿ. ಅವನ ಮೇಲೆ ನಂಬಿಕೆನು ಇತ್ತ್. ಮಳೆ ಬುಡದೆ ಕೂಡಿ ಕೂಡಿ ಬಂದ್ ಜಿಡಿಗುಟ್ಟ ಹೊಯೆತಿತ್ತ್.

ದನಿಗಳಿಗೆ ಚಳಿ ತಡಿಯಕೆ ಬೊತ್ತದೆ "ಏ......ಮಾನ ಇಂದ ಇಲ್ಲಿ ಬಾಯತ ಕರ್ದ.' ಮಾನ ಗದ್ದೆಂದ ಓಡಿ ಬಾತ್. ಇಂದ ಎರಡ್ ಎರಡ್ ಬೆರ್ಲ್ನಷ್ಟ್ ತಕಂಡ್ ಬಾತ ಹೇಳ್ದ. ಮನೆಗೆ ಹೋದ ಮಾನ ಅಟ್ಟಕ್ಕೆ ಹತ್ತಿ ಹುಳಿ ಮಡ್ಕೆ ಅಡ್ಡ ಇಸಿದ ಗೇರ್‌ದಣ್ಣ್ ಸರಯಾದ ಕ್ಯಾನ್‌ನನೇ ಹಿಡ್ಕಂಡ್ ಕೆಳಗೆ ಇಳ್ತ್.

ಅಷ್ಟ್ ಹೊತ್ತ್‌ಗೆ ದನಿಗಳ ಹೆಣ್ಣ್ ಒಂದ್ ಅಷ್ಟ್ ಚರಂಡಿ ಮೀನ್‌ನ ತುಂಡುಗಳ ಬೊರಿ ಹುಳಿ ಮೆಣ್ಸ್‌ಲೇ ಹೊರ್ದ್ ಮಾನನ ಕೈಲಿ ಕೊಟ್ಟ. ಅದರೆಲ್ಲ ಗದ್ದೆಗೆ ಹಿಡ್ಕಂಡ್ ಬಂದ್ ಮಾನ ಎಲ್ಲವುಕು ಮುಕ್ಕಾಲ್ ಮುಕ್ಕಾಲ್ ಗ್ಲಾಸ್‌ನಷ್ಟ್ ಮೊಗ್ಗ್‌ಸಿ ಕೊಟ್ಟತ್. ಗಂಡ್‌ಗ ಹೆಣ್ಣ್‌ಗ ತೇಳಿ ಮೀನ್‌ನು ಸರಾಯನು ಮುಗ್ದದ್ ಗೊತ್ತಾತ್ಲೆ. ಹಂಞ ಹೊತ್ತಾಕನ ಈ ಮುಕ್ಕಾಲ್ ಗ್ಲಾಸ್ ಪಿರ್ಕ್ಂಡ್ ಬಾಕನ ಇಡೀ ಕ್ಯಾನ್‌ನನೇ ತಂದ್ ಇಸಿತ್ ಮಾನ. ಎಲ್ಲವು ಅವ್ಕೆ ಬೇಕ ಬೇಕಾದಂಗೆ ಮೊಗ್ಗ್‌ಸಿಕಂಡ್ ಹೀರಿಕೆ ಸುರು ಮಾಡ್ದ.

ಮೊರ್ದಿನ ದೊಡ್ಡ ಗದ್ದೆ ಗೋರಿ ಅಂದ್ ಬಾರಿ ಗಮ್ಮತ್ತ್ ಇತ್ತ್. ದನಗಳ ಕಂಬಳಗಳ ಒಟ್ಟಿಗೆ ಮೊನ್ನರ ಕಂಬಳ ಸುರು ಆಗಿತ್ತು. ಚೋಳುಗದ್ದೆಲಿ ದುಗ್ಗ ಹೊಣ್ಕಿದ ಪೊರ್ಲುನ ನೋಡಿಕೆ ತುಂಬ ಲಾಯ್ಕ ಇತ್ತ್. ದುಗ್ಗಂಗೆ ಕುಡ್ದ್ ಡಿಂಜಣ ಆಗಿತ್ತ್. ದುಗ್ಗ ಎಲ್ಲವರೊಟ್ಟಿಗೆ ಓಟಕೆ ನಿತ್ತಿತ್. ಅವನ ಕಾಲ್ ನೆಲಲಿ ನಿಲ್ಲಿಕೆ ಬುಡ್ತಿತ್ಲೆ. ನಿತ್ತಲ್ಲಿಂದ ಅಲ್ಲೇ ಮೊಗ್ದ್ ಬೀತ್. ಎಲ್ಲವು ನೆಗಾಡಿಗೆ ಸುರು ಮಾಡ್ದ.

ಸಿಟ್ಟ್ ಬಂದ ದುಗ್ಗ ದನಿಗಳ ಒಟ್ಟಿಗೆ ಜಗಳಕೆ ನಿತ್ತಿತ್. ದನಿಗಳ ನೆತ್ತಿಗೆ ಏರ್ದ ಸಿಟ್ಟ್ ದುಗ್ಗನ ಚೋಳ್ ಗದ್ದೆಲಿ ಹೊಣ್ಣಿಕ್ಸಿದ ಕಡೆಗೆ ದನಿಗಳ ಮುಂಡಾಸ್ ದುಗ್ಗನ ಕೈಲಿ ದುಗ್ಗನ ಮುಂಡಾಸ್ ದನಿಗಳ ಕೈಲಿ ಆಗಿತ್ತ್. ಅಲ್ಲೆ ನಿಗರಿಕಂಡ್ ಇದ್ದ ದುಗ್ಗನ ಇವನ ಕರಿಬೊಡ್ದ್ ಹೋಗಲಿತ ಎರಡು ಮೂರು ಜನ ನೇಚಿ ಕುದ್ರಿಸಿದ ಇವಂಗೆ ತಲೆ ಪೊಕ್ಕ್ಸಿಕೆ ಆತಿತ್ಲೆ. ಹುಣ್ಸುಳಿ ನೀರ್ ಮಾಡಿ ಅವನ ದೊಂಡೆಗೆ ಹೊಯ್ದ.

ಮಾರ್ನೆ ದಿನ ದನಿಗ ಮತ್ತೆ ನಾಲ್ಕೈದ್ ಜನ ಸೇರಿಕಂಡ್ ಉಬೋರ್ ಮೀನ್

ಕಡಿಯಕೆ ಹೋದ. ಅದ್ ಸಾಕಾಗದೆ ಚೋಡಿಗೆ ಮೊನ್ ಕಡಿಯಕೆ ಹೋದ. ಹೋಕನ ಮಾನ ಯಾಗೋಳು ಹಿಡಿವ ಚಾಳಿ ಕತ್ತಿನ ಹಿಡ್ಕಂಡಿತ್ತ್. ಮೀನ್‌ನ ರುಚಿ ಸಿಕ್ಕಿ ಇವ್ಕೆಲ್ಲ ಮನೆಗೆ ಹೋಕುತ ಹೇಳುವ ಗೋಜಿಗೆ ಬಾತ್ಲೆ. ಅಲ್ಲಿ ನಡ್ದ ಕತೆ ಏನ್ತ ಗೊತ್ತುಟ? ದನಿಗಳಿಗೆ ಯಾರೋ ಉಳಿಯಲಿ ಕುದ್ದಂಗೆ ಕಂಡತ್ತ್ ಹಕ್ಕಲೆ ಹೋಗಿ ನೋಡಿರೆ ಸಾಂತನು ಐತನು ಗಾಳ ಹಾಕಂಡ್ ಕುದ್ದಿದ್ದ.

ಸಾಂತನು ಐತನು "ದನಿಗಳೇ ದನೀಗಳೆ ನಾವು ಕೂಡ ನಿಮ್ಮೊಟ್ಟಿಗೆ ಬಂದವೆಂತ ಹೇಳ್ದ ಓ ಯಾಗೋಳ್ ನಮ್ಮ ಬುಟ್ಟ್ ಹೋತಿದ್ದರಿತ ಮಾನ ಅವರ ಡೊಂಗಿ ಮಾಡ್ತ್.

ಹಾಂಗೆ ಎಲ್ಲವು ಸೇರಿಕರಡ್ ಮೊನ್ ಕಂಡ್ಕಂಡ್ ಕಂಡ್ಕಂಡ್ ಚೊಡಿಲಿ ಮೇಲೆ ಮೇಲೆ ಹೋದ.ಹಂಗೆ ಮಯ ಮಯ ಕತ್ತಲೆ ಆಕಂಡ್ ಬರ್ತ್ತೀತ್. ಮೊನ್ನನ ಗುರ್ತ ಸಿಕ್ಕಿದಷ್ಟೆ ಮಾನ ಇನ್ನ್ ನಾವು ಪೋಯಯಾತ ದನಿಗ ಹೇಳ್ದ. ಅಷ್ಟ್ ಹೊತ್ತ್‌ಗೆ ಸಾಂತನು ಐತನು ಊಹು ಊಹುತ ಹೇಳಿಕೆ ಸುರು ಮಾಡ್ದ.

ದನಿಗಳಿಗೆ ಸಿಟ್ಟ ಬಂದ್ ಎಂತ ನಿಮ್ಮ ಸೊವುದೆ ನಿವ್ಗೆ ಮಾತಾಡಿಕೆ ಬಾಯಿ ಬಾದ್ಲೆನ ನಿಮ್ಮ ದೊಂಡೆ ಕಟ್ಟಿ ಹೋವುಟಾ?ತ ಕೇಳ್ದ.

ಅಂದರು ಇವರ್ದ್ ಜೋರ್ ಜೋರ್ ಆಕಂಡ್ ಬಾತ್ ಅವನ ಕೈಲಿ ಇದ್ದ ಚಾಳಿ ಕತ್ತಿನ ನೆಲಕೆ ಬೇರಿ ಕಡ್ದ್ ಒಂದ್ ಆರ್ಭಟೆ ಕೊಟ್ಟತ್. ಅರ್ಧ ಜಿವ ಹಾರಿ ಹೋದ ದನಿಗ ನಿತ್ತಲ್ಲೆ ಉಚ್ಚೆ ಹೊಯ್ಕಂಡ. ತಿರ್ಗಿ ನೋಡ್ಕನ ಸಾಂತನು ಐತನು ಎಲ್ಲಿ ಹೋದ ತೇಳಿ ಗೊತ್ತಾತ್ಲೆ.

ಕಾಟ ಕಡ್ದ್ ಹೋಗಲಿತ ಮೊನ್‌ನ ಅಲ್ಲೆ ಬುಟ್ಟ್ ಸೀದಾ ಮನೆಗೆ ಹೋಕನ ಮೊಣ್ಣ್ ಪಾಲದ ಅಡಿಲಿ ಎರಡ್ ಹೆಣ್ಮ್ಕ್ಕ ಗಂಟ್ ಮಾರಾಪು ಗಳ ಬಿಚ್ಚಿಕಂಡ್ ಕುದ್ದಾಂಗೆ ದನಿಗಳಿಗೆ ಕಂಡತ್. ಇದರ ನೋಡಿ ಮಾನಾ ಕಥೆ ಕೆಟ್ಟತ್‌ಯ ತೇಳಿ ಹಲ್ಲು ಹುಟ್ಟುದಾಂಗೆ ಎಲ್ಲವು ಸೀದಾ ಓಡಿ ಹೋಗಿ ನಿತ್ತದೇ ಮನೆ ಜಾಲ್‌ಲಿ. ಹುಳಿ ಮೆಣ್ಸ್ ಕಡ್ದ್ ಇಸಿ ಪಾರ ಕುದ್ದ್ ಕುದ್ದ್ ಬೊಚ್ಚಿದ ದನಿಗಳ ಹೆಣ್ಣ್ ಇವರ ಮೊನ್ ತುಲ ಕಾಲ್‌ಹೆಟ್ಟತ್ ಮೋಂದ್ರಿ ಹಾಕಿ ಮಲ್ಗಿದವ್ಕೆ ಇವು ಬಂದ್ ಕರ್ದರು ಕಿರ್ಚಿರು ಇವ್ಕೆ ಗೊತ್ತಾತ್ಲೆ. ಇವರ ಕೆಬಿಗೆ ನಾಟಿತ್ಲೆ. ಸಿಟ್ಟ್ ಬಂದ ದನಿಗ ಇದರ ಹುಚ್ಚಿ ಬುಡ್ಸದೆ ಬುಡಿಕಿಲೆತ ಬಾಗ್‌ಲ್‌ಗೆ ಒಂದ್ ಒದ್ದ. ಒದ್ದ ರಭಸಕೆ ಬಾಗ್‌ಲ್ನ ಚಿಲ್ಲ್‌ಕ ರೆಟ್ಟಿ ಹೋತ್ ಅಷ್ಟ್ ಹೊತ್ತ್‌ಗೆ ಮಯ ಮಯ ದೀಪ ಹಿಡ್ಕೆಂಡ್ ಕಣ್ಣ್ ಚಿರಿಂಬಿಕಂಡ್ ಹೊರಗೆ ಬಂದ. ದನಿಗಳ ತಲೆಲಿ ಮುಂಡಾಸ್ ಇಲ್ಲೆ ಸಚ್ಚಿಟಲಿ ತೋರ್ತುನು ಇಲ್ಲದೆ ಬರೇ ಕೋಮಣಲಿ ದರ್ಪಿಕಂಡ್ ಕೈ ಕಾಲಿ ಆದರ ನೋಡಿ ಅಚ್ಚರಿ ಆತ್ ದನಿಗಳ ಹೆಣ್ಣ್‌ಗೆ.

ಅಲ್ಲಿ ನಡ್ದ ಸಂಗತಿಗಳೆಲ್ಲ ದನಿಗಳ ಹೆಣ್ಣ್‌ನ ಒಟ್ಟಿಗೆ ಮಾನ ಹೇಳ್‌ಕನ ಅವರ ರೋಮ ಪೂರ ಕುತ್ತ ಕುತ್ತ ಆಕಂಡ್ ಬಾತ್.

## ಹೊಸ ಬೊದ್ಕು

ಕಿಚ್ಚಿಗೆ ಹೆಟ್ಟಿದ ಮಿೋನ್‌ನ ಸಾವಸ ಬೇಡತ ನಾ ಬಗೆತಾರಲಿ ಹೇಳ್ದೆ. ಈಗ ಗೊತ್ತಾತ ನೀವ್ಗೆಂತ ದನಿಗಳ ಹೆಣ್ಣ್ ಕೊಚ್ಚಿಕಂಬಕೆ ಸುರು ಮಾಡ್ದ. ಮದ್ಯನದ ಮಿೋನ್ ಆಂಬರಲಿ ಉಂಬಕೆ ಕುದ್ದ. ಓಯ್ ಮಾನ ಸಾಂತನು ಐತನು ಎಲ್ಲಿ ಹೋಗಿರುವಯ! ದನಿಗ ಕೇಳಿಕೆ ಸುರು ಮಾಡ್ದ. "ಓ ಅದ್ ಸಂಗತಿ ಎಂತತ ನಿವ್ಗೆ ಗೊತ್ತಾತ್ಲೆನ! ನಮ್ಮ ಅಪ್ಪ ಹೇಳ್ತಿದ್ದ ಅಲ್ಲಿ ಬೀರ ದೆವ್ವ ಉಟ್ಟುತ ಅದುವೆ ದೆವ್ವಗ ನಮ್ಮೊಟ್ಟಿಗೆ ಒಳದ್‌ತ ಗೊತ್ತಾಗಿ ನಾ ಹಂಗೆ ಮಡ್ದ್. ಓ ದೇವ್ರೆ ನೀ ಇಲ್ಲದಿದ್ದರೆ ನಮ್ಮ ಎಡ್ರಾಸೇ ಇರಿಕಿತ್ಲೆ ಮಾರಾಯ ದನಿಗ ಮಾನನ ಹೊಗುಳಿಕೆ ಸುರು ಮಾಡ್ದ.ಮಾರ್ನೆ ದಿನ ಬೊಳ್ಪುಗೆ ದನಿಗಳಿಗೆ ಮೋದ್ರಿಂದ ಎದ್ರಿಕೆ ಆಗದಷ್ಟ್ ನೆಡ್ಗಿ ನೆಡ್ಗಿ ಜರ ಬರ್ತಿತ್ತ್. ಹೆಣ ಹೊತ್ತ್‌ಕಂಡ್ ಹೋದಾಂಗೆ ದನಿಗಳ ಆಸ್ಪತ್ರೆಗೆ ಹೊತ್ತ್‌ಕಂಡ್ ಹೋತ್ ಮಾನ. ವೈದ್ಯಗಾರನ ಹಕ್ಕಲೆ ಹೋಗಿ ನೂಲು ಬೊಸ್ಮ ತಂದ ಮಾರ್ನೆ ದಿನ ಎಲ್ಲವು ಇವ್ಕೆ ಡೊಂಗಿ ಮಾಡಿಕೆ ಸುರು ಮಾಡ್ದ.

ಒಂದ್ ದಿನ ಒಬ್ಬ ತಲೆ ಹೋಕ ಹೈದ ಏನ್ ಮಾಡ್ತ್ ಗೊತ್ತುಟಾ ದನಿಗ ತೋಟಕೆ ಹೋಗಿ ಬಾಕನ ಕತ್ತಲೆ ಆಕಂಡ್ ಬಂದಿತ್.

ಈ ಹಯ್ದ ಬಾಳೆ ಬುಡಲಿ ಅಂಡ್ಗಿ ನಿತ್ತ್ ಬರ ಬರಾತ ಬಾಳೆ ದರ್ಗ್ನ ಎಳ್ತ್. ದನಿಗ ತಿರ್ಗಿ ನೋಡ್‌ಕನ ಹಯ್ದ ಓಡ್ದು ಕಂಡ್ ಅವನ ಬೆರ್ಸಿಕಂಡ್ ಹೋದ.

ಪಾಪ ಅವರ ದೊಳ್ಳು ಹೊಟ್ಟೆನ ಹೊತ್ತ್‌ಕಂಡ್ ಎಲ್ಲಿ ಓಡಿಕಾದೆ.

ಮಾರ್ನೆ ದಿನ ಹಯ್ದ ಅವರ ಮನೆಗೆ ಬಾಕನ ಎಲೆಡ್ಕೆ ತಿಂದ್‌ಕಂಡ್ ಇದ್ದ ದನಿಗ ಅವನ ಹಿಡ್ದ್ ಅವನ ಮೋರೆ ತುಂಬ ಎಲೆಡ್ಕೆ ಮಡೆನ ಉಗ್ದ. ಅಳ್ಗೆಲ್ ಬಂದ ಹಯ್ದ ನೀವು ಸಾಯಕನ ಹುಳ ಆಗೇ ಸಾಯುವರಿತ ಸಾಪ ಹಾಕಿತ್.

ಇವರ ಕಿಣಿಗೆ ನಾನು ಕಿಣಿ ಮಾಡ್ನೆತ ನೆನ್ಸಿಕಂಡ ಹಯ್ದ ದನಿಗಳ ತೋಟಂದ ಅಡ್ಕೆ ಕದಿಯಕೆ ಹೋಗಿತ್ತ್. ಹಯ್ದ ಕಮ್ಮಿನ ಕೊಡಿಲಿ ನೇತಲಾಡಿಕಂಡ್ ಮಾಲೆಕಾಯಿನ ಪೂರ ಎಳ್ದ್ ಹಾಕಿತ್. ಇದರ ದನಿಗ ನೋಡ್ದ್ ಹಯ್ದಂಗೆ ಗೊತ್ತಾತ್ಲೆ. ನಿಂಗೆ ಮಾನ ಮೆರ್ಯಾದೆ ತೇಳ್ ವಂತದ್ ಇಲ್ಲೆ ನಿನ್ನ ಹೊಂಡ ಕಡ್ದ್ ಇಸದೆ ಬುಡಿಕಿಲೆತ ದನಿಗ ಕಮ್ಮಿನ ಬುಡಕೆ ಹೋದ.

ಈ ಸರ್ತಿ ಹೆದ್ರ್‌ದ ಹಯ್ದಂಗೆ ಏನ್ ಮಾಡೊಕುತ ಗೊತ್ತಾತ್ಲೆ. ಹಯ್ದ ದಮ್ಮಯ್ಯ ಹಾಕಿಕೆ ಸುರು ಮಾಡ್ತ್. ನಿನ್ನ ಸೊಂಟನ ನಿಗರ್ಸ್‌ದೆ ಬುಡಿಕಿಲೆತ ದನಿಗ ಕಮ್ಮಿನ ಸುತ್ತು ಸುತ್ತು ಬಂದ. ಹಯ್ದ ಇಳ್ಕ್ಂಡ್ ಇಳ್ಕ್ಂಡ್ ಕೆಳೆಗೆ ಬಾಕನ ಬುಕ್ಕಿ ಉರ್ಚಿತ್.

ದನಿಗ ಮೋರೆ ತುಂಬಾ ಹೇಲ್ ಅರ್ಸಿಕಂಡ್ ಸೀದ ಚೋಡಿಗೆ ಒಂದೇ ಓಟ ಓಡ್ದ. ಮಾರ್ನೆ ದಿನ ಅವನ ಹಿಡ್ದ್ ಕಮ್ಮಿಗೆ ಕಟ್ಟಿ ಹಾಕಿ ಪೊರ್ಲು ಚೋವುಳಿ ಮೂಡೆನ ಕೊಡ್ಕಿದ. ಹಯ್ದಂಗೆ ಉರಿನ ತಡೆಕಾಗದೆ ಬೊದತೊಪ್ಪಿ ಬಿದ್ದಾಂಗೆ ಬೀತ್.

ಈಗ ದನಿಗಳಿಗೆ ಹಂಞ ಚಳಿ ಕುದ್ದತ್ತ್. ಇವನ ಹೆಣ ಕಡ್ತ್ ಕಂಡದೆತ ಅವರ

## ಹೊಸ ಬೊದ್ಕು

ಕೈಕಾಲ್ ದರ್ಪಿಕೆ ಸುರು ಆತ್.

ಅಷ್ಟ್ ಹೊತ್ತ್‌ಗೆ ದನಿಗಳ ಕೋಮಣ ಕೊಡಿಲಿ ಕಟ್ಟಿದ ಬೀಗದ ಕೈ ಬಿದ್ದದ್ ಗೊತ್ತಾತ್ಲೆ. ಅದರ ಹೆರ್ಕೆಂಡ್ ಹಯ್ದು ಒಂದೇ ಓಟ. ಮನೆಗೆ ಬಂದ ದನಿಗಳಿಗೆ ಬೀಗದ ಕೈ ಎಲ್ಲಿ ಬಿದ್ದ್ ಹೋವುಟತ ಗೊತ್ತಾಗದೇ ಮನೆಗೆ ಹೋಗಿ ತಲೆಗೆ ಕೈ ಹೊತ್ತ್ ಕುದ್ದ. ಬೊಳ್ಪಾಕನ ಹಯ್ದು ಬೀಗದ ಕೈ ಆಡ್ಸಿಕಂಡ್ ಬಾಕನ ಬಾರೀ ಕುಸಿ ಆತ್ ದನಿಗಳಿಗೆ ಈಗ ಅವನ ಮೇಲೆ ಇದ್ದ ಸಿಟ್ಟೆಲ್ಲ ಚೆಣ್ಂದ್ ಹೋತ್. ಮೊರ್ದಿನ ಅವರ ಮನೆಲಿ ಕರೆಂಟ್ ಕೆಲ್ಸಕೆ ಬರೋವುಕೆ ಕೊಡಿಕೆ ಸರಾಯ ಇತ್ಲೆ. ನಾಲ್ಕ್ ದಿನಕೆ ಹಿಂದೆ ಮಡ್ಕೆಗೆ ಹಾಕಿದ ಹಲ್ಸಿನ ಹಣ್ಣ್‌ನ ದನಿಗ ನೆಕ್ಕಿ ನೋಡ್‌ಕನ ಅದ್ ಹಂಞ ಹುಳಿ ಬಂದಿತ್ತ್. ಅದರ ಮಾನನ ಒಟ್ಟಿಗೆ ಕಾಸಿಕೆ ಹೇಳ್ದ.

ಮಾನ ಹಳ್ಳದ ಕರೆಲಿ ಹಂಞೂ ಕೆರ್ದ್ ಮೂರ್ ಕಲ್ಲ್ ಹಾಕಿ ಒಲೆ ಮಾಡ್ತ್. ಹಣ್ಣ್‌ನ ಮಡ್ಕೆನ ಹೊತ್ತ್‌ಕಂಡ್ ಬಂದ್ ಒಲೆ ಮೇಲೆ ಮಡ್ಕೆ ಇಸಿ ಪೈಪ್ ಪ್ಲೇಟ್ ಎಲ್ಲ ಇಸಿ ಮಡ್ಕೆ ಸುತ್ತ ಸೀರೆ ಚೆಲ್ಲ್‌ಗಳ ಸುತ್ತಿ ಅದ್ಕೆ ಬಿಗ್ತ ಹುತ್ತದ ಮೊಣ್ಣ್‌ನ ಉಜ್ಜಿ ಸೀಲ್ ಕುಪ್ಪಿನ ಇಸಿ ಕಿಚ್ಚಿ ಮೊಟ್ಟತ್. ಸೆಕೆ ಹತ್ತಿ ಸರಾಯ ಬೀಳಿಕೆ ಸುರು ಆಕನ ದನಿಗಳಿಗೆ ಹೊಟ್ಟೆ ಇಸಿ ಉಂಬಕೆ ಮನೆಗೆ ಹೋದ. ಮಾನಂಗೆ ಆಸೆ ತಡಿಯಕೆ ಆಗದೆ ಒಂದ್ ಗ್ಲಾಸ್‌ನಷ್ಟ್ ಮೊಗ್ಗ್‌ಸಿ ನೀರ್‌ಲಿ ಚನಿಯಕೆ ಇಸಿ. ದೊಂಡೆಗೆ ಹೊಯ್ಕಂಡತ್.

ಒಂದ್ ದಿನಕೆ ಮುಂದೆ ಕಟ್ಟಿದ ಕೋಳಿ ಆಂಬರಲಿ ಪೊರ್ಲು ಹರ್‌ಂಡದೆ ಉಂಡ್ ಬಂದ್ ಮಾನನ ಉಂಬಕೆ ಕಳ್ಸಿದ ದನಿಗ.

ಮಾನ ಹೋಗಿ ಒಂದ್ ಪುಂಡಿ ಉಂಡಿರ್ದಷ್ಟೆ. ಅಷ್ಟ್ ಹೊತ್ತ್‌ಗೆ ದನಿಗಳ ಕೆಬಿಗೆ ಎಂತೋ ಸದ್ದ್ ಕೇಳಿಕೆ ಸುರು ಆತ್. ಛೆ ಇದ್ ಎಂತ ಕರಿಬೊಡ್ಡದ್! ಇನ್ನ್ ಎಂತ ಮಾಡುವ ದಾರಿತ ಮಾನಾಆಆ.....ತ ಜೋರ್ ಕರೆಕೆ ಸುರು ಮಾಡ್ದ.

ಮಾನಂಗೆ ಗೊತ್ತಾತ್ ಏನೋ ಕಥೆ ನಡ್ದುಟತ ಹೇಳಿ ಬೇಗ ಬೇಗ ಉಂಡು ಮುಗ್ಸಿದ ಮಾನ ಹಳ್ಳದ ಕರೆಗೆ ಒಡ್ತ್ ಹೋಗಿ ನೋಡಿರೆ ಹಳ್ಳದ ಒಳೆಗೆ ಬಳ ಬಳತ ಸದ್ದ್ ಕೇಳ್ತಿತ್ತ್. ಮಾನ ಹಳ್ಳಕ್ಕೆ ಇಳ್ದ್ ಕಲ್ಲ್‌ಗಳ ಹೆರ್ಕಿ ಬೇರಿ ಬೇರಿ ಹೊಡ್ಕ್ಂಡ್ ಬೆರ್ಸಿಕಂಡ್ ಹಳ್ಳದ ಒಳೆಗೆನೆ ಹೋತ್.

ದನಿಗ ಒಲೆ ಬುಡಲಿ ಕಿಚ್ಚಿ ಹೋಸಿದ ರಬಸಕೆ ಹಣ್ಣ್ ಉಕ್ಕೆಂಡ್ ಬಾತ್ ಕೈಕಟ್ಟಿ ಕುದ್ದ ದನಿಗಳಿಗೆ ಸರಾಯನ ಗೋಜಿಗೆ ಹೊತ್ಲೆ. ಮತ್ತೆ ಯಾವ ಸುದ್ದಿ ಸುಲಾಕ್ ಕೇಳ್ತ್‌ಲೆ. ಅದ್ ಎಂತ ಆಗಿರ್ದುಯ ಮಾನತ ದನಿಗ ಕೇಳ್ದ. ಅದ್ ಬ್ರಮ್ಮ ರಕ್ಕಸಿ ತ ಮಾನ ಹೇಳ್ದರ ಕೇಳಿ ಅವರ ರೋಮ ಪೊರ ಕುತ್ತ ಕುತ್ತ ಆಕಂಡ್ ಬಾತ್ ನಾಲ್ಕೈದ್ ಕುಪ್ಪಿ ತುಂಬಿದಾಂಗೆ ಎಲ್ಲ ತಕಂಡ್ ಮನೆಗೆ ಬಂದ.

ಮಾರ್ನೆ ದಿನ ಎಲ್ಲ ಕೆಲ್ಸ ಮುಗ್ದ ಕುಸಿಲಿ ಎಲ್ಲವುಕು ಮೂಕು ಮುಟ್ಟ ಕುಡೆಕೆ ತಿಂಬಕೆ

ಕೊಟ್ಟ. ಕರೆಂಟ್ ಬಂದ ಕುಸಿಲಿ ಎಲ್ಲ ಕೊಂಬರೆಲಿ ಕರೆಂಟ್ ಕೊಣೆತಿತ್. ಬಲ್ಬುಗಳ ಕೆಡ್ಸುವ ಉಪಾಯ ದನಿಗಳಿಗೆ ಗೊತ್ತಾಗದೆ ಮೇಜದ ಮೇಲೆ ಹತ್ತಿ ಬಲ್ಬುಗಳಿಗೆ ಉರ್ಗಿಕೆ ಸುರು ಮಾಡ್ದ. ಒಬ್ಬ ತಲೆ ಹೋಕ ತಪ್ಪಾಳೆ ತಟ್ಟಿ ನೆಗಾಡಿಕೆ ಸುರು ಮಾಡ್ತ್. ಸಿಟ್ಟ್ ಬಂದ ದನಿಗ ಬಾಗ್‌ಲ್ ಮೂಲೆಲಿ ಇಸಿದ ರೆಂಕಿಲ್ ದೊಣ್ಣೆನ ತಂದ್ ಅವಂಗೆ ಬೊಡಿಯಕೆ ಬೀರ್ದ ರಬಸಲಿ ಬಲ್ಬು ಪಟ್ಟ್‌ತ ಒಡ್ದ್ ಹೋತ್ ದನಿಗಳೆ ದನಿಗಳೆ ಕರೆಂಟ್ ಕೆಟ್ಟತ್‌ತ ಹೇಳಿ ಬೊದ್ಕಿರೆ ಬೇಡಿ ತಿಂಬೆತ ಅಲ್ಲಿಂದ ತೊಪ್ಪ್‌ಸಿಕಂಡತ್. ಬಲ್ಬು ಒಡ್ದ್ ಹೋವುಟತ ಗೊತ್ತಾಗದ ದನಿಗ ಎಲ್ಲ ಕೊಂಬರೆಗೆ ಹೋಗಿ ದೊಣ್ಣೆ ಬೀರ್ದ ಬಲ್ಬುಗ ಒಡ್ದ ಕತೆ ಮತ್ತೆ ದನಿಗಳಿಗೆ ಗೊತ್ತಾತ್. ಇನ್ನ್ ರಜೆ ಮುಗೆಕೆ ಮುಂದೆ ಒಮ್ಮೆ ಮಾನನು ದನಿಗ ಇಬ್ಬೊರ್ ಸೇರಿ ಅವರ ಅತ್ತೆ ಮನೆಗೆ ಹೋದ. ಇವು ಹೋಕನ ಒಲೆ ಮೇಲೆ ಮೊಣ್ಣ್‌ನ ಅಳೆಗೆಲಿ ಗೊಜ ಗೊಜ ಕೊದಿವ ಸದ್ದ್ ಕೇಳ್ದ ದನಿಗಳಿಗೆ ಇಂದ್ ನಾವು ಬಂದ ಗಳ್ಗೆ ಒಳ್ಳೆದ್ ಉಟ್ಟುತ ಬಾಯಿಲಿ ನೀರ್ ಅರ್ನಿಕಂಡ ಆಸೆ ಬುರ್ಕಿ ಅತ್ತೆಗೆ ಆತ್ ಈ ಸುಡ್ ಗಾಡ್‌ನವಂಗೆ ಬಾಕೆ ಇಂದೇ ದಿನ ಸಿಕ್ಕಿದ? ಎಲ್ಲಿ ಹುಳ್ಳಂಗೆ ತಿಂಬಕೆ ಸಿಕ್ಕಿದೆತ ನೋಕಲೆ ಹಾಕಂಡೆ ಬಾದು ಒಟ್ಟಿಗೊಬ್ಬ ಇವಂಗೆ ಪಾಸಡಿ. ಇವ್ಕೆ ಹಂಞ ಮೊನಿ ಕೊಟ್ಟರೆ ಸಾಲ್ದ್ ರಣ ತಿಂದಾಂಗೆ ತಿನೊಕು ಇವ್ಕೆ ಬುದ್ದಿ ಕಲ್‌ಸೊಕುತ ನೀರ್ ಮುಗ್ದುಟುತ ಬಾಗ್‌ಲ್ ಹಾಕಿ ಕೊಡ್ಪಣ ತಕಂಡ್ ಬಾಮಿ ಕರೆಗೆ ಹೋದ. ಅಷ್ಟ್ ಹೊತ್ತ್‌ಗೆ ಅತ್ತೆ ಅದೆಂತ ಒಲೆಲಿ ಕೊದಿದುತ ದನಿಗ ಕೇಳ್ದ.

ಅದ್ ನಿನ್ನ ಮಾವನ ಒಲ್ಲಿ ಕಾಂಪುರಿ ಬೊಡ್ಡ್ ಹೋವುಟು ಹಂಗೆ ಕೆಟ್ಟಿಗರ ಕಾಯಿ ಗುದ್ದಿಹಾಕಿ ಬೆಯಕೆ ಇಸಿದ್‌ತ ಸುಳ್ಳ್ ಹೇಳಿ ನೀರ್‌ಗೆ ಹೋದ ಅತ್ತೆ.

ದನಿಗ ಮೆಲ್ಲ ಬಾಗ್‌ಲ್ ತೆಗ್ದ್ ಒಲೆ ಮೇಲೆ ಕೊದಿದು ಎಂತ ಆಗಿರ್ದುತ ನೋಡ್‌ಕನ ಕೋಳಿ ಗೈಪು.

ಒಯ್ ಮಾನ ಅತ್ತೆನ ಕಳ್ಳಕಿಣಿಗೆ ಎಂತ ಮೊದ್ದುತ ಕೇಳ್ದ. ಮಾನ ಹೇಳಿಕೊಟ್ಟ ಉಪಾಯ ಸರಿತ ಅವರ ಕೋಮಣನ ಬಿಚ್ಚಿ ಅಳೆಗೆಗೆ ಹಾಕಿದ.

ನೀರ್ ತಕಂಡ್ ಬಂದ ಅತ್ತೆ ಗೈಪು ಅಡಿ ಹಿಡ್ದಿರ್ದುತ ಸೆಡೆ ಹಾಕಿ ಮೊಗ್‌ಚ್‌ಕನ ಬಟ್ಟೆ ತುಂಡ್ ಸೆಡೆಗೆ ಸಿಕ್ಕ್‌ತ್ತಿತ್.

ಅತ್ತೆ ನಾವು ಇನ್ನ್ ಹೋದವೆತ ದನಿಗ ಹೊರ್ಟ.. ನಿಲ್ಲಿ ನಾ ಗೈಪು ಇಸಿದೆ ಒಲೆಲಿತ ಹೇಳ್ದ. ಅತ್ತೆ ಅದ್ ಗೈಪಾ! ಮಾವನ ಒಲ್ಲಿತ ಹೇಳ್‌ದರಿ ನೀವು. ಅದರ ಒಟ್ಟಿಗೆ ನನದ್ ಒಂದ್ ಇರ್ಲಿತ ಕೋಮಣ ಬಿಚ್ಚಿ ಹಾಕಿದೆತ ಹೇಳ್ದ ಅಳಿಯನ ಮಾತ್ ಕೇಳ್ದ ಅತ್ತೆ ಅವರ ಕಣ್ಣ್ ಎದ್‌ರೇ ನೀ ಮೊಣ್ಣ್ ತಿಂದ್ ಕಂಕ್‌ಣಿ ಕುತ್ತೇ ಹೋಗ್‌ತ ಬಾಳೆ ಬುಡಕೆ ಸೊರ್ಗಿದ.

ಅಲ್ಲಿಂದ ಮಾನನು ದನಿಗಳು ನೆಗಾಡಿಕಂಡ್ ಬಂದ ಗುಳಿಂಞನ ಕಲ್ಲ್ ಹಕ್ಕಲೆ ಎತ್ತ್‌ಕನ ಬರ್ರ್,,,ತ ಎಂತೋ ಹಾರ್ದ ಸದ್ದ್ ಕೇಳಿ ದನಿಗಳ ಹೊಟ್ಟೆ ನೆಡ್ಗಿಕೆ ಸುರು ಆತ್. ಮನೆಗೆ ಹೋಕೆ ಪಿಂಡಿನ ಮುಲ್ಲೆಲಿ ಕುದ್ದ ಮಾನ ಪಿಂಡಿ ತೆಗ್ತ್ ನೆಡು ಹಳ್ಳಕೆ ಎತ್ತ್‌ಕನ

## ಹೊಸ ಬೊದ್ಕು

ಮಾನಂಗೆ ಕಣ್ಣ್ ಕತ್ತಲೆ ಬಂದ್ ದಳ್ಳ ತೆಗೆಕೆ ಆಗದೆ ಮುಂಗರ್‍ನ್ಸಿ ನೀರ್‌ಗೆ ಬೀತ್.

ಕಂತಿಕಂಡ್ ಕಂತಿಕಂಡ್ ಹೋದ ಮಾನನ ಹೆಂಗೆ ಗುಡ್ಡೆಗೆ ಹಾಕುದುತ ಗೊತ್ತಾಗದೆ ಒಮ್ಮೆ ದನಿಗ ಮಾನಾ............ತ ಕಿರ್‍ಚಿದ.

ದನಿಗಳಿಗೆ ಏನಾತ್‌ತ ಹೆದ್ರಿ ಓಡಿ ಮಾನ ಹಕ್ಕಲೆ ಬಾಕನ ದನಿಗ  ನಾಯಿ ಹೆಡೆಗೆಲಿ ಮಲ್ಕೆಂಡ್ ಇದ್ದ. ಕರಿಯ ನಾಯಿ ಅವರ ಎದೆಮೇಲೆ ತಲೆ ಇಸಿ ಮಲ್ಗಿತ್.

ಮಾನಂಗೆ ಮೋರೆ ತೋರ್‍ಸಿಕೆ ಆಗದ ದನಿಗ ಸೀದಾ ಒಳಗೆ ಹೋಗಿ ಹೆಣ್ಣ್‌ನ ಕರೆಕನ ಅವರ ಉಸ್‌ರ್ ನಿತ್ತ್ ಹೋಗಿ. ಆಚೆ ಹೊಣ್ಕಿಸಿರೆ ಆಚೆ ಈಚೆ ಹೊಣ್ಕುಸಿರೆ ಈಚೆ ಆಗಿದ.

ಕಟ್ಟಿದ ಕನ್ಸ್ ಬೊರಿ ಕನ್ಸ್ ಆಗದೆ ದನಿಗಳ ಕಣ್ಣ್‌ಂದ ನೀರ್ ಹನ್ಕುವಾಂಗೆ ಆತ್.

* * * * * *

# ಕುಸಿ ಕೊಟ್ಟ ಕೂಸು

ಇಷ್ಟ್ ಸಮಯ ಈ ಮನೇಲಿದ್ದ್ ಇಂದ್‌ದ ಅವಳ ಸ್ಥಾನ ಬೇರೆ ಆತ್. ಅತ್ತೆ ಮನೆಲಿದ್ದ್ ಭಾವ ಆದ ಆನಂದ ಸೌಮ್ಯನ ಗಂಡ ಆತ್.

ಈಗ ಸೌಮ್ಯ ಮಾತ್ರ ಅಲ್ಲ ಸೌಮ್ಯ ಆನಂದ ಆಗಿತ್ತ್. ಸೌಮ್ಯನ ಅಪ್ಪನ ತಂಗೆ ಶಾರದ ಸೋದರತ್ತೆ ಆಗಿದ್ದ. ಈಗ ಮಂಜಂಗೆ ತಂದ ಮೇಲೆ ಅವಳ ಸೊಸೆ ಆಗಿ ತುಂಬಿಸಿಕಂಡ. ಅವಳ ಮೊದ್ವೆ ಗೊತ್ತಿಲ್ಲದಾಂಗೆ ನಡ್ದ್ ಹೋತ್.

ಅವಳಿಗೆ ಹದಿನೈದ್ ದಿನಗಳ ಹಿಂದೆಷ್ಟೆ ಮೊದ್ವೆ ವಿಷಯ ಗೊತ್ತಾದ್. ಮೊದ್ವೆನ ಬಗ್ಗೆ ಕಲ್ಪನೆ ಅವಳಿಗಿತ್ಲೆ. ಶಾರದತ್ತೆ ಕುಂಕುಮ ಭಾಗ್ಯನ ಕಳ್ಕಂಡಿದ್ದ. ಸೌಮ್ಯನ ಅಪ್ಪ ತೀರಿ ಹೋಗಿ ತುಂಬಾ ವರ್ಷ ಆಗಿತ್ತ್. ಅವಳ ಕಣ್ಣ್ ಮುಂದೆ ಹದಿನೈದ್ ದಿನಗಳ ಹಿಂದೆನ ನೆನ್ಪ್ ಹುಟ್ಟಿತ್.

ಸೋದರತ್ತೆನ ಮನೆಲಿದ್ದ್ ಕಾಲೇಜ್‌ಲಿ ಓದ್‌ತ್ತಿತ್ತ್. ಅಂದ್ ಆದಿತ್ಯವಾರ ಸೌಮ್ಯ ಊರ್ ಕಡೆ ಹೊಗಿತ್ತ್.

ಇದ್ದಕಿದ್ದ ಹಾಂಗೆ ಸೋದರತ್ತೆ ಅವಳ ಮನೆಗೆ ಹೋದ. ಅವಳ ಅಮ್ಮಂಗೆ ಅಚ್ಚರಿ! ಆತ್ "ಬಡವರ ಮನೆಗೆ ಭಾಗ್ಯಲಕ್ಷ್ಮಿ ಬಂದಾಂಗೆ ಬಂದಳೊರಿ" "ಹೌದು ನಮ್ಮ ಮನೆಗೆ ತಕ್ಕ ಸೊಸೆ ಬೇಕು ಅದ್ಕೆ ಸೌಮ್ಯನ ಕೇಳಿಕೆ ಬಂದೆ." ವಿಷಯ ತಿಳ್ಸಿದ ಶಾರದ ಅಂದೇ ಹೊರ್ಟ್ ಹೋದ.ಸೌಮ್ಯನ ಅಮ್ಮ ಮೀನಾಕ್ಷಿಗೆ ಖುಷಿ ಆತ್.

"ಹೌದು ಹೆಣ್ಣ್‌ಗೆ ಆಶ್ರಯ ಬೇಕು. ನಾ ಎಷ್ಟ್ ದಿನ ಇದ್ದನೆ. ಏನಿದ್ದರು ಅಣ್ಣನ

ಮಂಜ ತಾನೆ. ನಮ್ಮ ಸೋದರ ಸಂಬಂಧ ಯಾಗೋಳು ಬುಟ್ಟ್‌ಹೋಕೆ ಆಗದ್" ಮಗಳ ಮನ್ಸ್‌ಗೆ ಕುಸಿ ಆಗುವ ಹಂಗೆ ಹೋಗುಲ್ದ. ಮಗಳಿಗೆ ಮಾತ್ರ ಇಷ್ಟ ಇತ್ಲೆ. ಓದಿ ಕೆಲ್ಸ ಮಾಡಿಕಂಡ್ ಲಾಯ್ಕಲಿ ನನ್ನ ಅಮ್ಮನ ಸಾಂಕಿ ಅವರ ಮನ್ಸ್‌ಗೆ ನೆಮ್ಮದಿ ಕೊಡಕು ಅಂತ ಅವಳ ಆಸೆ ಆಗಿತ್ತ್.

"ಅತ್ತಗೆ ದುಡ್ಡ್, ಚಿನ್ನ, ಆಸ್ತಿ, ಅಂತಸ್ತ್, ಕಾರ್, ಬಂಗಲೆ, ಇರುವ ಹೆಣ್ಣೇ ಬೇಕಾದ್ ಮತ್ತೆ ಯಾಕೆ ಮಂಜಂಗೆ ನನ್ನ ಮೊದ್ವೆ ಮಾಡ್ಸುವೆ" ಅವಳ ಮನ್ಸ್‌ಲಿ ಅಚ್ಚರಿ! ಆತ್. ಅಂತು ಮೊದ್ವೆ ನಡ್ದ್ ಬುಟ್ಟತ್. ಮೊದ್ವೆಗಾಗಿ ಹದಿನೈದ್ ದಿನ ಕಾಲೇಜ್‌ಗೆ ರಜೆ ಹಾಕಿತ್ತ್. ಮತ್ತೆ ಅವಳ ನೆನ್ಪ್ ಕಾಲೇಜ್ ಕಡೆ ತಿರ್ಗಿತ್ತ್. ಅಂದ್ ಜೋಡ್ಸಿ ಇಸಿದ ಪುಸ್ತಕನ ಒಂದೊಂದೆ ತೆಗ್ದ್ ಓದಿಕೆ ಸುರು ಮಾಡ್ತ್ ಸೌಮ್ಯ.

ಅದ್ ಅತ್ತೆಗೆ ಇಷ್ಟ ಆತ್ಲೆ. "ಏನ್ ಸೌಮ್ಯ ಪುಸ್ತಕ ಹಿಡ್ದಹಂಗೆ ಕಂಡದೆ. ಇನ್ನ್ ಪುಸ್ತಕ, ಪೆನ್ನ್, ಕಾಲೇಜ್, ಅಂತ ಬೇಡ. ಮನೆ ಒಳಗೆ ಸೆಡೆ, ಮಡ್ಕೆ ಹಿಡಿಯಕೆ ಕಲಿ. ಅದ್ ಸಾಕಾಗದರೆ ತೋಟಕೆ ಹೋಗಿ ಹುಲ್ಲು ಸೊಪ್ಪು ಮಾಡ್" ದೊಡ್ಡ ಸ್ವರ ತೆಗ್ದ್ ಹೇಳ್ದ. ಅತ್ತೆಗೆ ಎದ್ರ್ ಉತ್ತರ ಕೊಡಿಕೆ ಆಗದೆ ಸೌಮ್ಯನ ಮೋರೆ ಬಾಡಿ ಹೋತ್,

"ದುಡ್ಡು ತರುವ ಸೊಸೆನ ಮೊದ್ವೆ ಮಾಡ್ಸೊಕು ಅಂತ ಮನ್ಸಿದ್ದರೆ ಮನೆ ಕೆಲ್ಸ ಮಾಡಿಕೆ ಒಪ್ಪಿಕಿಲೆಂತ ಗೊತ್ತಾಗಿ ಅತ್ತೆನ ಮನ್ಸ್‌ನ ಬದಲಾಯ್ಸಿದ. ಅಪ್ಪನ ಮೋರೆ ನಾ ನೋಡದರು ಅಮ್ಮನೆ ಅಪ್ಪನ ಸ್ಥಾನಲಿ ನಿತ್ತ್ ನನ್ನ ಸಾಕಿದ ವಿದ್ಯೆ ಕಲ್ಸಿದ. ಆದ ಪ್ರಯೋಜನ ಯಾವುದು ಇಲ್ಲೆ. ನನ್ನ ಕಾಲ್ ಮೇಲೆ ನಿಲ್ಲುವ ಆಸೆ ಹೊತ್ತರೆ ಇಲ್ಲಿ ಸಿಕ್ಕಿದ್ ಅಡ್ಗೆ ಮನೆ ಕೆಲ್ಸ.. ಇನ್ನಾದರ್ ಕೆಲ್ಸಕೆ ಕಳ್ಸಿರೆ ಲಾಯ್ಕಲಿ ಜೀವನ ನಡ್ಸ್‌ಕ್" ಒಬ್ಬಳೆ ಕುದ್ದ್ ಯೋಚ್ನೆ ಮಾಡ್ತ್. ಆನಂದ ಎಳೆ ಪ್ರಾಯದ ಹಯ್ದ್. ಏನು ಕೆಲ್ಸ ಮಾಡದೆ ಅಮ್ಮನ ಕೈಂದ ದುಡ್ಡ್ ತಕಂಡ್ ಜೋಬು ತುಂಬಿಸಿ ಕಂಡ್ ಬಾರ್, ಹೋಟೆಲ್, ಅದ್ ಇದ್ ತಕಂಡ್ ಜೋಸ್ತಿಗಳ ಒಟ್ಟಿಗೆ ಸೇರಿಕಂಡ್, ದೊಡ್ಡ ಜನಗಳಾಂಗೆ ಮೆರ್ಕಂಡ್, ಕತ್ತಲಾಕನ ಮನೆಗೆ ಬಂದ್, ತಿಂದ್, ಉಂಡ್‌ಕಂಡ್ ಹೆಣ್ಣ್‌ನ ತಬ್ಬಿ ಮಲ್ಗುದು ಇವನ ಕೆಲ್ಸ ಆಗಿತ್ತ್.

ಆನಂದನ ಕೆಟ್ಟ ವರ್ತನೆಗಳ ಕಂಡ ಸೌಮ್ಯನ ತಲೆ ಕೆಟ್ಟ್ ಹೋದಂಗೆ ಆತ್. "ಗಂಡನಾಗಿ ಹುಟ್ಟಿ ಕೆಲ್ಸ ಮಾಡದೆ ತಿರ್ಗಿ ತಿಂದರೆ ಎಲ್ಲಿ ಉದ್ಧಾರ ಆದವೆ?" ಸೌಮ್ಯನ ಮಾತ್ ಆನಂದನ ಎದೆಗೆ ಚೂರಿ ಹಾಕಿದಾಂಗೆ ಆತ್. ಇನ್ನ್ ಹೊರಗೆ ಹೋಗಿ ಕೆಲ್ಸ ಮಾಡ್ದು ಒಳ್ಳೆದ್ ಜೋಬು ತುಂಬಿದೆ. ಸೌಮ್ಯನ ಕಾಟನು ಜಾಸ್ತಿ ಆದೆಂತ ಕಂಟ್ರಾಕ್ಟ್ ಕೆಲ್ಸಕೆ ಕೈ ಹಾಕಿತ್.

ಕೂಲಿ ಆಳ್‌ಗಳಿಗೆ ಸರಿ ಸಂಬಳ ಕೊಡದೆ ಬೊಳ್ಪು ಆಕನ ಇವನ ಬಾಗ್‌ಲ್ ಮುಂದೆ ದುಡ್ಡ್‌ಗಾಗಿ ಬಂದ್ ನಿಲ್ತಿದ್ದ. ಗಂಡನ ದೆಸೆಂದ ಅವಳ ಮನ್ಸ್‌ಗೆ ಬೇಜಾರ್.

ಗಂಡನ ಸಮಸ್ಯೆ ಜಾಸ್ತಿ ಆಗಿ ಕೈಕಾಲ್ ನಡ್ಗಿಕೆ ಸುರು ಆತ್ "ಇದ್ ಎಂತ

ವ್ಯವಹಾರ?" ಬಾಗ್‌ಲ್ ಮುಂದೆ ನಿಲ್ಲುವರ ಮೇಲೆ ಸೌಮ್ಯಂಗೆ ಕೋಪ. "ಇನ್ನೆಲ್ಲಿ ಸಾಲ ಮಾಡಿಕಂಡ್ ಬಂದಳ ಏನೋ" " ನನ್ನ ಎಲ್ಲ ವಿಷಯ ಸೌಮ್ಯಂಗೆ ಗೊತ್ತುಟು. ಅವಳಿಗೆ ಇನ್ನ್ ಹೆಂಗೆ ಮುಖ ತೊರ್ಸುದು? ಇಲ್ಲೆ ನಾ ಯಕೆ ಇವಳಿಗೆ ಹೆದ್ರುದು ನಾ ಗಂಡ ತಾನೆ" ಮನ್ಸ್ ಗಟ್ಟಿ ಮಾಡಿ ಮನೆಗೆ ಬಂದರೆ ಆನಂದನ ಮುಖ ಕೆಳಗೆನೇ ಇತ್ತ್. ಸಾಲ ಮಾಡಿಕಂಡ್ ಬಂದಳೆ ಮನೆ ಮುಂದೆ ಸಾಲ ಕೇಳಿಕೆ ಕೂಲಿ ಕೆಲ್ಸದವು ಬಂದ್ ನಿತ್ತವೆ. ಹಿಂದೆ ಮುಂದೆ ಯೋಚನೆ ಮಾಡದೆ ತಪ್ಪಿಸಿಕಂಡ್ ಊರ್‌ಡೀ ತಿರ್‍ಗುವೆ ಮಜಾ ಮಾಡ್ವೆ ದೇವ್ರು ಇವ್ಕೆ ಹೊಂಗೆ ಮನ್ಸ್ ಕೊಟ್ಟದೆ! ಸೌಮ್ಯನ ತಲೆಲಿ ಒಂದೊಂದ್ ಪ್ರಶ್ನೆಗ ಹುಟ್ಟಿಕಂಡ್ ಆನಂದನ ಮೋರೆನ ತಲೆ ಎತ್ತಿ ನೋಡದೆ ಸಾಲ ತೀರ್ಸುವ ಆಲೋಚನೆ ಅವಳ್‌ದಾಗಿತ್ತ್ "ಮಂಜನ ವಿಷಯ ಅತ್ತೆಗೆ ಗೊತ್ತಿದ್ದರು ಎಷ್ಟ್ ಕುಸಿಲಿ ಒಳ" ಸೌಮ್ಯನ ತಲೆ ತಿರ್‍ಗಿ ಹೋಗಿತ್.

"ಅಂದ್ ಮೊದ್ವೆಗೆ ಹಾಕಿದ ಒಂದ್ ಜೊತೆ ಬಳೆ ಉಟ್ಟು ಅದರ ಅಡು ಇಸಿ ಸಾಲ ತೀರ್ಸಮ" "ಚಿನ್ನ ಯಾಕೆ ಕೊಡ್ತು?" ಅತ್ತೆಗೆ ಒಳಗೊಳಗೆ ಮನ್ಸ್ ಇದ್ದರು ಅವು ಯಾಕೆ ಕಮ್ಮಿ ಆದುಂತ ಶಾರದನ ಕಿಣಿ. "ಅತ್ತೆ ಚಿನ್ನ ಹಾಕಿ ಗೌರವ ಸಿಕ್ಕುದು ಬೇಡ ಗುಣ, ನಡ್ತೆ ಮಾನ ಮೊರ್ಯಾದೆ, ನ ಲಾಯ್ಕಲಿ ನಡ್ಸಿಕಂಡರೆ ಸಾಕ್. ಇವರ ಕಾಟಂದ ನಾವ್ಗೆ ಮೋರೆ ತೋರ್ಸಿಕೆ ಆದ್ಲೆ" ಸೌಮ್ಯನ ಮಾತ್‌ಗೆ ಉತ್ತರ ಕೊಡಿಕೆ ಆಗದೆ ಒಪ್ಪಿಕಂಡ ಅವಳ ಅತ್ತೆ.

ಬಳೆಗಳ ತಕಂಡ್ ಹೋಗಿ ಬ್ಯಾಂಕ್‌ಲಿ ಅಡು ಇಸಿ ಸಾದಾರಣ ಸಾಲಗಳ ಸೌಮ್ಯ ತೀರ್ಸಿತ್. "ಅಬ್ಬಾ! ನನ್ನ ಗಂಡ ಯಾಗ ಒಳ್ಳೆದಾರಿಗೆ ಬಂದವೆಂತ ಮನ್ಸ್‌ಲಿ ಕೊರ್‍ಗಿರೆ" ನಿನ್ನ ಮೊದ್ವೆ ಆದ ಮೇಲೆ ಮೊದ್ವೆ ಆದವೆಲ್ಲ ಸೊಂಟಲಿ ಮಕ್ಕಳ ಇಸಿಕಂಡ್ ತಿರ್‍ಗುವೆ.

ಪಿಳ್ಳೆಕಳ ಎತ್ತಿ ಆಡ್ಸದೆ ನಾ ಯಾಗ ಸತ್ತನೆಂತ ಗೊತ್ಲೆ" ಅತ್ತೆನ ಮಾತ್‌ಕೇಳಿ ಸೌಮ್ಯನ ಹೊಟ್ಟೆಗೆ ಚೂರಿ ಹಾಕಿದಂಗೆ ಆಗಿತ್ತ್. ಗಂಡನ ಚಿಂತೆ ಒಟ್ಟಿಗೆ ಇವರ ಮಾತ್‌ಬೇರೆ ಒಂದ್ ದಿನ ಆನಂದ ಕೆಲ್ಸ ಬುಟ್ಟ್ ಬಾಕನ ಆನಂದನ ಕೈಲಿ ಸೌಮ್ಯಂಗೆ ಬಂದ ಕಾಗದ ಇತ್ತ್. ಕಾಗದ ಒಡ್ದ್ ಓದಿತ್ತ್ ಸೌಮ್ಯ. ಆ ಕಾಗದ ಸೌಮ್ಯನ ಬಾಲ್ಯದ ಜೋಸ್ತಿ ಹರೀಶ್‌ನ ಕಾಗದ ಆಗಿತ್ತ್.

ಹರೀಶ್ ಮತ್ತೆ ಸೌಮ್ಯನ ಹಿಂದೆನ ದಿನಗ ಅವಳ ಕಣ್ಣ್ ಮುಂದೆ ಕಾಂಬೊತ್ತಿತ್ತ್. ಸೌಮ್ಯನ ನೆನ್ಪು ಇಸಿಕಂಡ್ ಬರ್‍ದ ಕಾಗದ ನೋಡಿ ಅವಳ ಕುಸಿಗೆ ಲೆಕ್ಕನೇ ಇಲ್ಲದಾಂಗತ್. ಮಾರ್‍ನೆ ದಿನ ಮಧ್ಯಾನ ಹೊತ್ತ್‌ಗೆ ಮನೆ ಮುಂದೆ ರಿಕ್ಷ ಬಂದ್ ನಿತ್ತ ಶಬ್ದ ಕೇಳಿ, ಸೌಮ್ಯ ಬಾಗ್‌ಲ್ ತೆಗ್ದ್ ನೋಡ್‌ಕನ ಹರೀಶ್ ಅವಳ ಮನೆ ಮೆಟ್ಲ್‌ಕಲ್ಲ್‌ಲಿ ನಿತ್ತಿತ್ತ್. "ನನ್ನ ಅಮ್ಮನ ಬುಟ್ಟರೆ ನನ್ನವುಂತ ನಂಗೆ ಯಾರು ಇಲ್ಲೆ." ಹಳೆ ನೆನ್ಪುಲಿ ಬಂದ ಹರೀಶ್‌ನ ಕುಸಿಲಿ ಒಳಗೆ ಕರ್‍ದ್ ಕುದ್ರಿಸಿತ್.

ಹರೀಶ್ ಮುಂದೆನ ಲಕ್ಷಣ ಇತ್ಲೆ, ಕಣ್ಣ್ ಗುಂಡಿಗೆ ಹೋಗಿತ್ ತಲೆಲಿ ಕುದೊಲು.

ಅಲ್ಲೆಲ್ಲಿ ಬಿಳಿ ಆಗಿತ್ ಶರೀರ ತುಂಬಾ ಸಣ್ಣದಾಗಿ ಕಾಣ್ತಿತ್ತ್. ಸೌಮ್ಯಂಗೆ ಇವನ ನೋಡಿ ಅಚ್ಚರಿ! ಆತ್ "ನಿಂಗೇನ್ ಹುಷಾರ್ ಇಲ್ಲೆನ, ತುಂಬಾ ಇಳ್ದ್ ಹೋಗಳ." "ಇಳ್ದ್ ಹೊತ್ಲೆ, ಹತ್ತಿನು ಹೊತ್ಲೆ ಇದ್ದಾಂಗೆ ಒಳೆ. ಅತ್ತೆ ಮಗಳ ಮೊದ್ವೆ ಆದೆ. ಎರಡ್ ಮಕ್ಕ ಆಕನ ನನ್ನ ಬುಟ್ಟ್ ಹೋತ್." ಅವನ ಗಂಟ್ಲ್ ಕಟ್ಟಿದಾಂಗೆ ಆಗಿ ಇಬ್ರೂರ್ ಮಾತಾಡದೆ ಸುಮ್ಮನಾದ. "ಇದ್ ನನ್ನ ಕಥೆ ನೀ ತುಂಬಾ ಕಂಗಲ್ ಆಗಳ ಯಾಕೆ? ಮಕ್ಕ ಆತ್ಲೆಂತ ಗೊತ್ತಾತ್. ಅದ್ವೆ ಬೇಜಾರಾ?" "ಹೌದ್ ಹರೀಶ್ ಇಬ್ಬರದ್ ಒಂದೊಂದ್ ತರದ ಕತೆ ಆತ್." ಗಂಡ (ಆನಂದ) ಮತ್ತೆ ಅತ್ತೆ ಕೊಡುವ ಕಷ್ಟಗಳ ಸಾಲ್‌ನ ಅವನ ಎದ್ರ್ ಬಿಚ್ಚಿ ಹೇಳ್ತ್. "ಹೋಗಲಿ ಬುಡ್ ಅದರೆಲ್ಲ ತಲೆಗೆ ಹಾಕಂಡ್ರೆ ಈ ಸಮಾಜಲಿ ಬೊದ್ಕಿಕೆ ಸಾದ್ಯ ಇಲ್ಲೆ. ಯೋಚ್ನೆ ಮಾಡಿ ಆಗುವ ಪ್ರಯೋಜನ ಇಲ್ಲೆ. ಆದದ್ದಾಗಿ ಹೋತ್" ಸೌಮ್ಯಂಗೆ ಸಮದಾನ ಹೇಳ್ತ್. ಕೆಲ್ಸ ಕಡೆ ಹೋದ ಆನಂದ ಮನೆಗೆ ಬಾತ್ ಹರೀಶನ ನೋಡಿ ಆನಂದನ ಮೋರೆ ಕಾದ್ ಕೆಂಪಾತ್. ಸೌಮ್ಯಂಗೆ ಏನ್ ಮಾಡೊಕುಂತ ಗೊತ್ತಾತ್ಲೆ. ಗಂಡನ ಸಿಡ್ಕ್ ಬುದ್ಧಿ ಅವಳಿಗೆ ಗೊತ್ತಿತ್ತ್. ಹರೀಶ್‌ನ ಪರ್ಚಯ ಮಾಡ್ಸಿ ಕೊಟ್ಟತ್ ಆನಂದ್‌ಗೆ.

ಸುಬಗನಂಗೆ ಆನಂದ ಅವನ ಮಾತಾಡ್ಸಿ ಪರಿಚಯಗಳ ಮಾಡಿಕಂಡ. "ನಿಮ್ಮದ್ ಸುಖದ ಜೀವನ. ನನ್ನದ್ ನೋಡಿ ತಲೆ ತಿಂಬ ಕೆಲ್ಸ." ತಲೆ ತೊರ್ಸಿಕಂಡ್ ಹೇಳ್ತ್ ಆನಂದ. "ಯಾಕೆ ತಲೆ ತಿಂಬ ಕೆಲ್ಸ? ನೀವು ಇಬ್ರೂರ್ ದುಡ್ದರೆ ಯಾಕೆ ತಲೆ ತಿಂದವೆ.! ಈಗ ಏಷೋ ಜನ ಸಂಘ ಸಂಸ್ಥೆಗಳ ಸೇರಿಕಂಡ್ ಲಾಯ್ಕಲಿ ಜೀವನ ನಡ್ಸುವೆ.

"ಸೌಮ್ಯ ನಿನ್ನ ಪ್ರತಿಭೆಗೆ ಈ ಮನೆ ತುಂಬಾ ಸಹಕಾರ ಕೊಟ್ಟದೆ. ಆನಂದನು ಬೇಡಂತ ಹೇಳ್ದುಲೆ ಮತ್ಯಾಕೆ ನೀ ಮನೇಲಿ ಇದ್ದಿಯ?. ನಾ ಕೆಲ್ಸ ಮಾಡುವ ಊರ್‌ಲಿ ಆಸ್ಪತ್ರೆಗೆ ಒಂದ್ ಜನ ಬೇಕು. ಕೆಲ್ಸ ಮಾಡುವ ಆಸೆ ಇದ್ದರೆ ನಿನ್ನ ಹೆಸ್ರ್ ಕೊಟ್ಟನೆ." ಆನಂದನ ಮೋರೆ ನೋಡಿ ಹೇಳಿತ್ ಹರೀಶ್.

"ಓ ನನ್ನದೇನ್ ಅಡ್ಡಿ ಇಲ್ಲೆ." ಮಾತ್‌ಗೆ ಮಾತ್ ಸೇರ್ಸಿತ್ ಆನಂದ. ಸೌಮ್ಯನ ಮೋರೆಲಿ ಕುಸಿನ ಚಿತ್ರ ಹುಟ್ಟಿತ್. ಅಬ್ಬಾ! ಕಾಲೇಜ್‌ಗಂತು ಕಳ್ಸದ್ಲೆ ಈ ನೇವನಲಿ ಹೊರಗೆ ಹೊರ್ಡುವ ಕೆಲ್ಸ ಆತಲಾಂತ ಕುಸಿ ಪಟ್ಟ್‌ಕಂಡತ್.

ಕೆಲ್ಸ ಸಿಕ್ಕುವ ದಿನಗಳ ಲೆಕ್ಕ ಹಾಕಿತ್ ಸೌಮ್ಯ. ತಿಂಗಳ ಕಡೆ ದಿನ ಸೌಮ್ಯನ ಹೆಸ್ರ್‌ಲಿ ಇಂಟರ್‌ವ್ಯು ಕಾರ್ಡ್ ಬಾತ್. ಇಂಟರ್‌ವ್ಯು ನಾಳೆ ಉಟುಂತ ಗೊತ್ತಾಕನ ಒಂದ್ ಗೂಡೆ ಸೌಮ್ಯನ ಕೇಳಿ ಕಂಡ್ ಬಂದಿತ್ತ್. ಆ ಗೂಡೆನ ಒಟ್ಟಿಗೆ ಒಂದ್ ಹೆಣ್ಣ್ ಕೂಸು ಕೂಡ ಇತ್ತ್. ಸೌಮ್ಯಂಗೆ ತುಂಬಾ ಕುಸಿ ಆತ್ "ಇದ್‌ವರೆಗೆ ನನ್ನ ಕೇಳಿಕಂಡ್ ಬಂದವು ಯಾರೂ ಇಲ್ಲೆ ಕೆಲ್ಸ ಸಿಕ್ಕಿಕೆ ಮುಂದೆ ನನ್ನ ಪರಿಚಯ ಕೇಳಿ ಕಂಡ್ ಬಂದ"ಕುಸಿಲಿ ಹೊರಗೆ ಬಾತ್ ಸೌಮ್ಯ.

ಎಣ್ಣೆ ಕಾಣದ ಕುದೊಲು, ಚಪ್ಪಲ್ ಇಲ್ಲದ ಕಾಲ್‌ಗ, ಮಾಸೆಲ್ ಬಣ್ಣದ ಸೀರೆ,

ಹೊಳ್ಪುವ ಕಣ್ಣ್, ಉದ್ದ ಮೂಕು, ಒಟ್ಟಿಗೆ ಹೆಣ್ಣ್ ಕೂಸು.

ಸೌಮ್ಯನ ಕಂಡ ಆ ಗೂಡೆ ಇವಳಿಗೆ ಎರಡ್ ಕೈ ಮುಗ್ದ್ ನಿತ್ತಿತ್ತ್. "ನನ್ನ ಹೆಸ್ರ್ ರಾಧ ನನ್ನ ಕೂಸು, ಕೈ ಕಾಲ್ ಬಾರದ ಮಲ್ಗಿಕಂಡ್ ಇರುವ ನನ್ನ ಅಮ್ಮ ನಿದ್ದೆ ಮಾಡಿಕೆ ಸಣ್ಣ ಮನೆ. ನಾ ಅದ್ವೆ ಆಸ್ಪತ್ರೆಗೆ ಅರ್ಜಿ ಹಾಕಿದೆ.

ಎಲ್ಲ ಕಷ್ಟಗಳ ನೋಡಿಕಣ್‌ವ ಕೆಲ್ಸ ನನ್ನ ಮೇಲೆ ಭಾರ ಆಗಿ ನಿತ್ತುಟು, ನೀವು ಅಲ್ಲಿಗೆ ಹೋಗುವ ವಿಷಯ ಗೊತ್ತಾಗಿ ಇಲ್ಲಿಗೆ ಬಂದೆ. ನಂಗೆ ಕೆಲ್ಸ ಸಿಕ್ಕದೆ ಹೋದರೆ ನಾ ಬೊದ್ಕುವ ರೀತಿ ಹೆಗೆಂತ ಗೊತ್ತದ್ಲೆ." ಕಣ್ಣಂದ ಹನಿಗ ಅವಳ ಕೆನ್ನೆ ಮೇಲೆ ಇಳ್ತ್. ಸೌಮ್ಯನ ಕರ್ಲ್ ಚುರುಕ್ ಹೇಳ್ತ್. ಒಟ್ಟಿಗೆ ಕೂಸು ಉಟ್ಟು ಗಂಡ ಎಲ್ಲಿ ಹೋಗಿರ್ದು! "ನಿನ್ನ ಗಂಡ ಎಂತ ಕೆಲ್ಸ ಮಾಡ್ದುಂತ ಸೌಮ್ಯ ಕೇಳ್ತ್.

ರಾಧನ ಮೋರೆ ಚಪ್ಪೆ ಹಿಡ್ತ್. "ಅಂದೊಂದ್ ದಿನ ನಾ ಕೆಲ್ಸಕೆ ಹೊಗುವ ದಾರಿಲಿ ಆನಂದ ನಂಗಾಗಿ ಕಾದ್ ಕುದ್ದಿದ್ದ ಒತ್ತಾಯಲಿ ನನ್ನ ಬೇಕಾದ ಹಂಗೆ ಅವರ ಕಾಮದ ಆಸೆನ ತಿರ್ಸಿಕಂಡ್ ಈ ವಿಷಯ ನನ್ನ ಮನೆವ್ಕೆ ಗೊತ್ತಾದರೆ ನಿನ್ನ ಜೀವ ಉಳ್ಸಿಕಿಲೆಂತ ಹೆದ್ರಿಸಿದ್ದ. ಆ ಪ್ರತಿ ಫಲನೆ ಈ ಕೂಸು" ಅವಳ ಜೀವನಲಿ ನಡ್ದ ಕಥೆಗಳ ವಿವರ್ಸಿತ್.

"ಛೆ ಇಂಥ ಗಂಡನ ಕಟ್ಟಿಕಂಡ್ ಬೊದ್ಕಿಕೆ ಸಾಧ್ಯ ಇಲ್ಲೆ ಇದೆಲ್ಲ ನನ್ನ ಹಣೆಲಿ ಬರ್ದ ಬರ ಆ ಬ್ರಹ್ಮ ಯಾಕಾಗಿ ಇಂಥ ಕಷ್ಟ ಕೊಟ್ಟದೆ.? ಹಲ್ಲ್ ಕಚ್ಚಿ ಹಿಡ್ದ್. ಏನ್ ಮಾಡ್ದು. ನಾಳೆ ಇಂಟರ್‌ವ್ಯೂ" ಓದೊಕುಂತ ಅವಳಿಗೆ ಗೊತ್ತಾತ್ಲೆ. ಕತ್ತಲೆಗೆ ಮನೆಗೆ ಬಂದ ಆನಂದ "ಇಂಡರ್‌ವ್ಯೂ ರೆಡಿನ" ಅವನ ಮಾತ್‌ಗೆ ಉತ್ತರ ಕೊಡದೆ ಅವಳ ಕೋಣೆಗೆ ಹೋಗಿ ಮಲ್ಗಿತ್ ಸೌಮ್ಯ. ಯಾಗಾರ್ ಒಮ್ಮೊಮ್ಮೆ ಉಸಿರ್ ಬುಡುವ ಹೆಣ್ಣ್‌ನ ಕೈ ಎಳ್ದ್ ಅವನ ತೊಡೆ ಮೇಲೆ ಮಲ್ಗಿಸಿ "ಕೆಲ್ಸ ಮಾತ್ರ ಗ್ಯಾರಂಟಿ. ಸುರುನ ಸಂಬಳ ಯಾರಿಗೆ.? ಗಂಡನ ಮಾತ್ ಅವಳ ಕೆನ್ನೆಗೆ ಹೊಡ್ದಿತ್ತ್. ನಾಚಿಕೆ ಇಲ್ಲದ ಇವಂಗೆ ಎಷ್ಟ್ ಹೇಳಿರು ಮಾನ "ಮರ್ಯಾದೆ ಇಲ್ಲದೆ ನಾಯಿ ಬಾಲ ಒಟೆಗೆ ಹಾಕಿದಾಂಗೆ ಮುಂದೆನ ಜನ್ಮಲಿ ಕಷ್ಟ ಪಡುವ ಬುತ್ತಿ ಇದ್. ಇವನ ಸ್ವಭಾವ ಎಲ್ಲಿ ಬುಟ್ಟ್ ಹೋದೆ. ಇವನ ಹೊಟ್ಟೆ ತುಂಬಿರೆ ಸಾಕ್ ಇನ್ನೊಬ್ಬರ ಕಷ್ಟನ ಅರ್ಥ ಮಾಡಿಕಣದೆ ಹಾಂಕರಲಿ ಮೆರ್ದದೆ. ಇವನ ಮಜಕ್ಕಾಗಿ ನಾ ಕೆಲ್ಸಕೆ ಹೊಕಾ? ಹೊಟ್ಟೆಗೆ ಗಂಜಿ ಇಲ್ಲದವರ ಎದ್ರ್ ತಿಂಬಕೆ ಬೆಣ್ಣೆ ಕೇಳ್‌ವ ಇಂವ ಹಿಂಗೆ ಇರ್‌ಕನ ನಾ ಕೆಲ್ಸಕೆ ಸೇರಿಕಂಡ್ರೆ ಈ ಗಂಡ ಬೇಡುದರ ನಿಲ್ಸಿಕಿಲೆ."

ಇಂಟರ್‌ವ್ಯೂಗೆ ಹೋಕೆ ಮನ್ಸ್ ಇಲ್ಲದೆ ಗಂಡನ ಒತ್ತಾಯಕೆ ಮನ್ಸ್ ಇಲ್ಲದ ಮನ್ಸ್‌ಂದ ಹೊರ್ಟಿತ್ ಸೌಮ್ಯ. ಹನ್ನೊಂದ್ ಗಂಟೆಗೆ ಇಂಟರ್‌ವ್ಯೂ. ಸೌಮ್ಯ ಹೊದ ಹಂಞ ಹೊತ್ತಲಿ ಆ ಗೂಡೆ ಅಲ್ಲಿಗೆ ಬಂದಿತ್ತ್. ಇವಳ ನೊಡ್ದ ಸೌಮ್ಯಂಗೆ ಮೈ ಬೆಗರಿಕೆ ಸುರು ಆತ್. ಆಗಳೆ ಹನ್ನೊಂದ್ ಗಂಟೆ ಆಗಿತ್ತ್. ಒಳಗೆ ಸೌಮ್ಯನ ಹೆಸ್ರ್ ಕರ್ದ್ ಹೇಳ್ತಿದ್ದ. ಅವಳ ಮೈ ಮೇಲೆ ಎಚ್ಚರ ಇತ್ಲೆ. ಅಲ್ಲಿ ಇದ್ದವರ ಪೈಕಿ ಸೌಮ್ಯನ ಎಚ್ಚರ ಮಾಡ್ದ. ಸೌಮ್ಯನ

ಮನ್ಸ್ ಯಾವ ನಿರ್ಧಾರ ಮಾಡದೆ ಅಲ್ಲೆ ನಿತ್ತ ರಿಕ್ಷ ಹತ್ತಿ ಮನೆ ಕಡೆ ಹೊರ್ಟ್ತ್.

ಮಧ್ಯಾನ ಮನೆಗೆ ಬಂದ ಆನಂದ "ಇಂಡರ್‌ವ್ಯೂ ಮುಗ್ತಾ? ಹೆಂಗಿತ್ತ್. ಯಾಗ ಕೆಲ್ಸ" "ಹೋತ್ಲೆ ಹಂಗೆ ಬಂದೆ" "ಯಾಕೆ ಏನಾತ್" "ಏನಾತ್ಲೆ ನಿಮ್ಮ ನಡ್ತೆ, ಬುದ್ಧಿ, ಸರಿ ಇಲ್ಲೆ ಮಕ್ಕಳ ಹೆರುವ ಆಸೆಲಿ ನಾನು ಕೂಸ್‌ಗಾಗಿ ಆಸೆ ಪಟ್ಟರೆ, ನೀವ್ಗೆ ಮಕ್ಕ ಬೇಕಾಗಿಲ್ಲೆ ನೀವು ಹೆಣ್ಣ್‌ನ ಮನ್ಸ್‌ನ ಅರ್ಥ ಮಾಡಿಕಣದೆ, ಹೆಣ್ಣ್‌ನ ಒಟ್ಟಿಗೆ ಮಲ್ಗಿ ಕಾಮದ ಆಸೆ ತಿರ್ಸಿಕಂಡ್ ಮಜಾ ಮಾಡಿಕೆ ಮಾತ್ರ ಗೊತ್ತ್. ಅಂದ್ ಹಿಂದೆ ಮುಂದೆ ನೋಡದೆ ರಾಧನ ಹಾಳ್ ಮಾಡ್ದರಿ ಅವಳ್ ಪಡುವ ಕಷ್ಟನ ನೀವು ಯೋಚಿಸ್ತ ಇಲ್ಲೆ. ಯಾರ್ ಹಾಳಾದರೇನ್. ನಿಮ್ಮ ಅಜ್ಞಾನ ಕೊಳಕ್ ಬುದ್ಧಿ ಯಾಗ ದೂರ ಆದು?" ಸೌಮ್ಯನ ಹೃದಯ ಭಾರ ಆಗಿಕಣ್ಣ್‌ಲಿ ನೀರ್ ಹರ್ದ್ ಬಾತ್. ಅತ್ತೆ, ಗಂಡನ, ಹಂಗ್ ಇವಳ ಕೆಬಿಗೆ ಚುರ್ದಾಂಗೆ ಆತ್.

"ತುಂಬಾ ಓದಿದೆಂತ ಇವಳ ಜಂಬ. ಮಂಜಂಗೆ ಎರಡ್ನೆ ಮೊದ್ವೆ ಮಾಡ್ಸಿನೆ. ಇವಳ್ ಹಾಳಾಗಿ ಹೋಗಲಿ" ಅವಳತ್ತೆ ಹಕ್ಕಲೆ ಮನೆ ಹೆಂಗ್ಸ್‌ನ ಒಟ್ಟಿಗೆ ಹೇಳ್‌ವ ಮಾತ್ ಅವಳ ಕೆಬಿಗೆ ಬೀತ್. ಅಮ್ಮ ಯಾಗ ಎರಡ್ನೆ ಮೊದ್ವೆ ಬಗ್ಗೆ ಹೇಳ್ದಂತ ಪಾರ ಕಾದ್ ಕುದ್ದಿತ್. ಹೆಣ್ಣಂತೆಳಕನ ಮಿೂಸೆ ಕೊಣ್ಸಿಕೆ ಸುರು ಮಾಡಿತ್ ಆನಂದ.

ಗಂಡನ ಕೋಲಗಳ ಕಂಡ್ "ನನ್ನ ಬುಟ್ಟ್ ಬೇರೆ ಮೊದ್ವೆ ಆದವೆನಾ! ಅತ್ತೆನ ಒತ್ತಾಯ ಆಗಿರೊಕು ಬೇರೆ ಮೊದ್ವೆ ಆದರೆ ಅವಳ ಪರಿಸ್ಥಿತಿ ಅಷ್ಟೆ. ಯಾವ ಸುಖ ಸಿಕ್ಕುದು." ಗಂಡನ ಮೋರೆ ನೋಡ್ದರ ಬುಟ್ಟಿತ್ ಸೌಮ್ಯ.

ರಾಧಂಗೆ ಕೆಲ್ಸ ಬುಟ್ಟ್ ಕೊಟ್ಟ ವಿಚಾರಲಿ "ಏನ್ ಅವಳಿಗೆ ನಿ ಕೆಲ್ಸ ಬುಟ್ಟ್ ಕೊಟ್ಟ, ಕೋಟ್ಯಾಧಿಪತಿನ ಪಿಳ್ಳಿನ ನೀ, ಕೆಲ್ಸ ಬೇಡಂತ ಬಂದ ನಿಂಗೆ ಕಟ್ಟಿಕಂಡ ಗಂಡಂದ. ಹರೀಶನ ಒಟ್ಟಿಗೆ ಮಾತ್ ಹೆಚ್ಚಾತ್ ನಿಂದ್, ಮಾನ ಮೊರ್ಯಾದೆ ಇಲ್ಲದ್ ನಿನ್ನ ಬುಟ್ಟ್ ಬೇರೆ ಮೊದ್ವೆ ಆದೆ ಒಳ್ಳದ್"

ಗಂಡನ ಮಾತ್ ಕೇಳಿ ತಲೆ ಮೇಲೆ ಕೈ ಹೊತ್ತ್ ಕಿರ್ಚಿದೆ. ವಾಂತಿ ಮಾಡಿ ಮೂಕು, ಬಾಯಿಲಿ ನೀರ್ ತುಂಬಿ ಬೋದ ತಪ್ಪಿ ಬಿದ್ದಿತ್ತ್.

ಹೆದ್ರ್‌ದ ಆನಂದ ಆಸ್ಪತ್ರೆಗೆ ಕರ್ಕಂಡ್ ಹೋಗಿ ಪರಿಕ್ಷೆ ಮಾಡ್ಸಿತ್. ಪರೀಕ್ಷೆ ಮಾಡ್ದ ಡಾಕ್ಟರ್ "ನೀ ಅಪ್ಪ ಆಗ್ತ ಒಳ" ಆನಂದನ ಮೋರೆಲಿ ನಗೆ ಕಾಂಬೊತ್ತಿತ್ತ್. ಮನೆಗೆ ಬಂದ ಆನಂದ ಅಮ್ಮಂಗೆ ವಿಷಯ ತಿಳ್ಸಿತ್.

ಕೆಟ್ಟ ಸುದ್ದಿ ಕೇಳ್ದವರ ಹಂಗೆ ಅವನ ಅಮ್ಮನ ಮುಸ್‌ಂಡ್ ಬಾಪಿ ಹೊಗಿತ್ತ್. "ನೀ ಅಪ್ಪ ಆದುಹೆಂಗೆ? ಹರೀಶನ ಒಟ್ಟಿಗೆ ಬೆಳ್ದ ಪ್ರೀತಿ ಅದ್" ಆನಂದನ ಅನುಮಾನ ಏನ್ ಇತ್ಲೆ "ಇಂದ್‌ನವರೆಗೆ ನನ್ನ ಮಂಜಂಗೆ ಬೊಸುರಿ ಆತ್ಲೆ. ಹರೀಶಂಗೆ ಬೊಸುರಿ ಆಗಿ ಅ ಹಾಳಾದ ಕೆಟ್ಟ ಪಿಂಡನ ಹೊತ್ತ್‌ಕಂಡ್ ನಾಚಿಕೆ, ಮೊರ್ಯಾದೆ ಇಲ್ಲದೆ ತಿರ್ಗಿದೆ." ಹಲ್ಲ್ ಕಚ್ಚಿತ್ ಅತ್ತೆ. ಸಣ್ಣದಿರ್‌ಕನ ಅಪ್ಪನ ಕಳ್ಕಂಡೆ. ಅನುಕೂಲಸ್ಥ ಗಂಡನ ಕೈ ಹಿಡ್ದರೆ ಸರಿಯಾದ

ನಡ್ತೆ ಇಲ್ಲದೆ ನನ್ನ ಪಾಲಿಗೆ ಯಾವ ಸುಖ ಉಟ್ಟು, ಅತ್ತೆನ ಗುನ್ಕು ಬುದ್ದಿ. ಪ್ರೀತಿಂದ ಮಾತಾಡ್ಸುವ ಜನಗಳೇ ಇಲ್ಲದೆ ನನ್ನ ಕಂಡರೆ ದನಗಳ ಹಿಡಿಯಕೆ ಹುಲಿಗ ಬಂದಾಂಗೆ ನನ್ನ ಮೇಲೆ ಬೀಳ್ತಾ ಒಳ." ತಿರ್ಗುವ ತಲೆನ ಒತ್ತಿ ಹಿಡ್ದ್ ಒಳೆಗೆನ ರಕ್ತ ಅವಳ ಮೈಲಿ ಕೊದೆತಿತ್ತ್.

"ಇದರೆಲ್ಲ ತಲೆಗೆ ಹಾಕಂಡ್ರೆ ನನ್ನ ಹೊಟ್ಟೆಲಿ ಮುದ್ದಾದ ಕೂಸ್ ಹುಟ್ಟುದು ಹೆಂಗೆ? ಮನ್ಸ್ ಮುರ್ಬಿ ಹೋತ್. ಇಂತ ಮಾತ್‌ಗ ಕೆಬಿಗೆ ಬಿದ್ದರೆ ಗರ್ಭದ ಒಳೆಗೆ ಇರುವ ಕೂಸುಗೆ ಇದುವೆ ಬುದ್ಧಿ. ಅತ್ತೆನ ಚಾಡಿ ಮಾತ್ ಮುಗಿಯದೆ. ನನ್ನ ಜೀವನಕೆ ಕತ್ತಲೆನ ತೆರೆ ಮುಚ್ಚಿಕಂಡ್ ಬರ್ತಾಟ್ಟು. ಆ ಕತ್ತಲೆನ ಸಿಗ್ದ್ ಅರಳ್‌ವ ಹೂವು ಹೊರಗೆ ಬಾದು ಕುಸಿನ ವಿಷಯ. ಮುಂದೆನ ದಿನಲಿ ಅರಳಿ ಹೆಚ್ಚಿ ಹೆಚ್ಚಿ ಪರಿಮಳ ಹರ್‍ಡೊಕು ಅದ್ಕಾಗಿ ಯಾವ ಕೆಟ್ಟ ಮಾತ್‌ಗಳ ಕಡೆ ಕೆಬಿ ಕೊಡ್ದುಲೆ."ಂತ ಸೌಮ್ಯ ನಿರ್ಧಾರ ಮಾಡಿತ್ತ್.

ಒಂಬತ್ತ್ ತಿಂಗ ತುಂಬಿಕಂಡ್ ಬಂದಾಂಗೆ ಅವಳ ಮೈ ಕೈ ತುಂಬಿ ಪೊರ್ಲು ಆಕಂಡ್ ಬಾತ್. ಸೌಮ್ಯ ಒಂದೇ ಮಗಳ್ ಆದರ್‌ಂದ ಅವರ ಆಸ್ತಿ ಆನಂದನ ಪಾಲ್ ಆದೆ. ಸಾಲಮಾಡ್ರೆ ಜಾಗ ಮಾರಿ ಸಾಲ ತಿರ್ಸುವ ಆಸೆಲಿ. ಸೌಮ್ಯಂಗೆ ಬೇಕಾದಂಗೆ ಹಣ್ಣ್ ಹೂವು ತಿಂಡಿಗಳ ತಂದ್ ಕೊಡ್ತಿತ್ತ್. ಅದ್ಕೆ ಬೇಕಾಗಿ ನಾ ಮೊದ್ವೆ ಆದ್ಲೆತ." ನೆನ್ಸಿದ ಆನಂದ ಪ್ರೀತಿಯಿಂದ ಮಾತಾಡ್ಸಿಕೆ ಶುರು ಮಾಡ್ತ್. ಸೌಮ್ಯಂಗೆ ಕೂಸು ಆಗು ಸುದ್ದಿ ಕೇಳಿ ಹರೀಶ್ ಸೌಮ್ಯನ ಮನೆಗೆ ಬಂದಿತ್. ಹರೀಶ್‌ನ ಮೊರೆ ಮೇಲೆಂದ ಇಳಿವ ಬೆಗ್‌ರ್‌ನ ಒರ್ಸಿ ಕಂಡ್ ಯೋಗ ಕ್ಷೇಮಗಳ ವಿಚಾರ್ಸಿಕಂಡ.

ಇದೆಂತ ನಿನ್ನ ಅವಸ್ಥೆ ಏನೋ ಹೆದ್ರಿ ಕಂಡ್ ಬಂದವರ ಹಾಂಗೆ ಬೆಗರ್‌ತ ಉಟ್ಟು ನಿಂಗೆ." ನಗಾಡಿಕಂಡ್ ಹೇಳ್ತ್ ಆನಂದ. "ಕೆಟ್ಟ ಕೆಲ್ಸ ಅಲ್ಲ ಮರಾಯ ನಂಗೆ ಹೆಣ್ಣ್ ಕೊಟ್ಟವೆಂತ ನನ್ನೊಟ್ಟಿಗೆ ಒಬ್ಬ ಹಠ ಮಾಡ್ತ್. ಅದ್ಕೆ ಅವರ ಕಣ್ಣ್ ತಪ್ಪಿಸಿ ಓಡಿ ಬಂದೆ."

"ಯಾಕೆ ಓಡಿ ಬಂದದ್" ಅಚ್ಚರಿಲಿ! ಕುತಿಗೆ ನೀಂಡಿ ಕೇಳ್ತ್ ಆನಂದ. ದೂರುಲಿ ಕುದ್ದ ಆನಂದನ ಅಮ್ಮನ ಕೆಬಿಗೆ ಈಸುದ್ದಿ ಕೇಳ್ತ್. "ಥೂ.... ಕಂಡವರ ಹೆಣ್ಣ್ ಮಕ್ಕಳಿಗೆ ಬಾಯಿ ಬುಡುವ ಬದ್ಲ್ ಇವಂಗೆ ಬೇರೆ ಮೊದ್ವೆ ಆದರೆ ಏನ್ ರೋಗ ಬೊಡೆತಿತ್ತ್. ಕೂಸುನ ಹುಟ್ಟುಸಿಕೆ ಬೇಕಾಗಿ ಸೌಮ್ಯ ಅವನ ಸಂಗ ಮಾಡ್ತ್. ಅವಂಗೂ ಇವಳ ಮೇಲೆ ಮನ್ಸಾತ್." ಅತ್ತೆನ ಅಪನಂಬಿಕೆ ಮನ್ಸ್ ಕೇಳದ ಶಾರದ "ಆಕಾಯ್ತ್ ಯಾಕೆ ಮೊದ್ವೆ ಬೇಡಾಂತ ಹೇಳ್ದು." ಮುಸುಂಡು ತಿರ್ಗಿಸಿತ್ ಶಾರದ, "ಹರೀಶ್ ಮೊದ್ವೆ ಆದರ್ಲಿ ತಪ್ಪೇನ್ ಉಟ್ಟು? ಮಕ್ಕಳಿಗೆ ಅಮ್ಮಂತ ಕರಿಯಕೆ , ಒಂಟಿಯಾಗಿ ಇರ್ದು ಯಾಗೊಳಿಗು ಸಾಧ್ಯನಾ?" ಸೌಮ್ಯ ಮಾತ್ ಸೇರ್ಸಿತ್.

"ಹೌದು ಮಾಡಿಕಣಕಾಯ್ತ್ ಮಾಡಿಕಂಡ ಹೆಣ್ಣ್‌ಗೆ ನನ್ನಂದ ಏನ್ ಸುಖ. ಮೊದ್ವೆ ಆದ ಹೆಣ್ಣ್‌ಗೆ ನನ್ನ ಹೊಟ್ಟೆಲಿ ಮಕ್ಕ ಹುಟ್ಟೊಕು ಅಂತ ಆಸೆ ಇದ್ದೆ ಇದ್ದದೆ. ಆ ಆಸೆಂದ

## ಹೊಸ ಬೊದ್ಕು

ಹೆಣ್ಣ್‌ನ ಮನ್ಸ್‌ನ ದೂರಮಾಡಿಕೆ ನಾ ಇಷ್ಟಪಡ್ದುಲೆ. ನಾನು ನನ್ನ ಎರಡ್ ಮಕ್ಕ ಅಷ್ಟೆ ಸಾಕ್.

"ಅಂಥ ಕತೆ ಏನಾತ್ ಹರೀಶ್" ಅಚ್ಚರಿಲಿ ಕೇಳ್ತ್ ಆನಂದ. ಮಕ್ಕ ಬೇಡಾಂತ ಅವಳಿಗೆ ಆಪರೇಷನ್ ಮಾಡ್ಸೊಕುಂತ ಇದ್ದೆ. ತುಂಬಾ ಲಾಚರ ಆಗಿದ್ದ ಅವಳ ಆಪರೇಷನ್ ಮಾಡಿಕೆ ಡಾಕ್ಟ್ರರ್ ಒಪ್ಪಿತ್ಲೆ. ನಾನೇ ಮಾಡ್ಸಿಕಂಡೆ. ಹಿಂಗಾಗಿ ಮಕ್ಕ ಆಗುವ ಸಮರ್ಥನೆ ನಂಗೆ ಇಲ್ಲೆ. ಅದ್ಕೆ ಬೇಕಾಗಿ ನಾ ಮೊದ್ವೆ ಆದ್ಲೆ. ಹೆಣ್ಣ್ ತೀರಿ ಹೋಗಿ ಒಂದ್ ವರ್ಷ ಆತ್" ಎಲ್ಲರ ಕಡೆ ಒಮ್ಮೆ ದೃಷ್ಟಿ ಹಾಕಿತ್ ಹರೀಶ್.

ಅವನ ಮಾತ್ ಕೇಳ್ದ ಶಾರದನ ಮನ್ಸ್‌ಗೆ ಸಮಧಾನ ಆತ್. ಸೌಮ್ಯನ ಹೊಟ್ಟೆಲಿ ಬೆಳೆವ ಕೂಸ್ ಮಂಜಂದ್‌ಂತ ಅರ್ಥ ಆಗಿ ಅವಳ ಕಡೆ ಪ್ರೀತಿನ ನೋಟ ಹರ್ಸಿದ. "ಅಬ್ಬಾ! ಈಗಾದ್ರ್ ಅತ್ತೆನ ಸಂಶಯಕೆ ಪರಿಹಾರ ಸಿಕ್ಕಿತಲ" ಕುಸಿಲಿತ್ತ್ ಸೌಮ್ಯ.

ನಾಲ್ಕ್ ಕೈ ಬಂದ ಸೊಸೆನ ಎಷ್ಟ್ ಲಾಯ್ಕ ನೋಡಿರು ಅತ್ತೆನ ಮನ್ಸ್‌ಗೆ ಸಮಧಾನ ಕಾಂಬೊತಿತ್ಲೆ. ಹೂವು, ಹಿಂಗಾರ, ಚಿನ್ನ, ಬಣ್ಣ, ಝರಿಸೀರೆ ಎಲ್ಲ ಸೌಮ್ಯನ ಹುಡ್ಕಿಕಂಡ್ ಬರ್ತಿತ್ತ್. ಅತ್ತೆ, ಗಂಡನ ಪ್ರೀತಿ ದಿನಂದ ದಿನಕೆ ಹೆಚ್ಚಾಗಿತ್ತ್.

ಅಂದ್ ಬೊಳ್ಪುಗೆ ಮಲ್ಗಿದ ಸೌಮ್ಯಂಗೆ ಹೊಟ್ಟೆ ಬೇನೆ. ಹೆರ್ಗಿ ಸುಲಭ ಆಗಲಿಂತ ತೊಂಡೆ ಬೊಳ್ಳಿ ಸೊಪ್ಪುನ ರಸ ತೆಗ್ದ್ ಜೀರ್ದ್‌ಕ್ಕಿ ಹಾಕಿ ಕಸಾಯ ಮಾಡಿ ಕುಡ್ಸಿದ ಅವಳತ್ತೆ. ಸೌಮ್ಯನ ಅಮ್ಮಂಗು ಹೇಳಿ ಕಳ್ಸಿದ. ಅಮ್ಮ ಬರುವ ಹೊತ್ತ್‌ಲಿ ಗಂಡ್ ಕೂಸುನ ಅಮ್ಮ ಆಗಿತ್ತ್ ಸೌಮ್ಯ. ಹರೀಶ ಆಸ್ಪತ್ರೆಗೆ ಬಂದಿತ್ ಬಿಳಿ ಬಟ್ಟೆಲಿ ಕಟ್ಟಿದ ಕೂಸುನ ಎತ್ತಿಕಂಡ್ ಹರೀಶ್‌ನ ಕಡೆ ತೋರ್ಸಿತ್ ಆನಂದ.

"ಕಣ್ಣ್, ಮೂಕು, ಬಾಯಿ, ಬಣ್ಣ ಎಲ್ಲ ಆನಂದನೆ" ಹೊಗ್‌ಳಿಕೆ ಸುರು ಮಾಡ್ದ ಶಾರದತ್ತೆ. ಕಣ್ಣ್, ಮೂಕ್ ಅವಂದೆ ಆಗಲಿ, ಗುಣ ನಡ್ತೆ ಹರೀಶಂದಾಗಲಿ. ಸೌಮ್ಯನ ಮನ್ಸ್ ಹೇಳ್ತ್. ಮುಗುಳ್ ನಗೆ ತೋರ್ಸಿತ್ ಹರೀಶ್. ಉಳ್ದವುಕೆ ಕೇಳ್ತಾ, ಇಲ್ಲೆನ. ಅವರ ಮನ್ಸ್ ಕೂಸುನ ಕಡೆ ಇತ್ತ್.

* * * * * *

# ಗೂಡೆಗೆ ಏನ್ ಬರ ಬಂದುಟು

ಮೊದುವೆಂತ ಹೇಳ್ದು ಜೀವನಲಿ ಎಲ್ಲವುಕ್ಕೂ ಇದ್ದೇ ಇದ್ದದೆ. ಗಂಡ್, ಹೆಣ್ಣ್‌ಗಳ, ಒಂದ್ ಗೂಡ್ಸುವ ಪವಿತ್ರ ಬಂಧ. ನಮ್ಮ ಮನೆ ಹಕ್ಕಲೆ, ಸುಂದರಿ ಅಜ್ಜಿನ ಮಂಜಂಗೆ ಮೊದುವೆ ಮಾಡುವ ಆಸೆ ಅಜ್ಜಿಗಾತ್. ಹಂಗೆ ಮಂಜನ ಒಟ್ಟಿಗೆ ಕೇಳ್‌ಕನ ಮಂಜನು ಒಪ್ಪಿಕಂಡತ್ತ್. ಗೂಡೆನ ನೋಡುವ ವಿಚಾರ ಅಜ್ಜಿನ ನೆನ್ಪಿಗಾತ್. ಮೂರು ವರ್ಷಕೆ ಹಿಂದೆ ಅಜ್ಜಿನ ತೌವ್ರು ಮನೆ ಹಕ್ಕಲೆ ಒಂದ್ ಗೂಡೆ ಇತ್ತ್. "ನೀವ್ಗೆ ಗೊತ್ತುಟಲ ಗೂಡೆಗ ಹೆಂಗೆ ಇದ್ದವೆಂತ. ಹಣೆಗೆ ಬೊಟ್ಟು, ಕೈಗೆ ಬಳೆ, ನೆತ್ತಿಲಿ ಬೊಕ್ತ್‌ಲೆ ತೆಗ್ದ್ ಬಾಚಿದ ಉದ್ದ ಕುದೊಲು, ನೈದ ಜಡೆಗೆ ಮಲ್ಲಿಗೆ ಮುಡ್ದ್ ಭಾರತದ ಸಂಸ್ಕೃತಿ ಹೆಂಗೆ ಉಟ್ಟು ಹಂಗೆನೇ ಬಾರೀ ಪೊರ್ಲುನ ಗೂಡೆ ಆಗಿ ಕಾಂಬೊತ್ತಿತ್ತ್. ಅಜ್ಜಿ ಅವಳನ್ನೇ ನನ್ನ ಸೊಸೆ ಆಗಿ ಮಾಡಿಕಣಕುತ ನೆನ್ಸಿ ಮಂಜನ ಒಟ್ಟಿಗೆ ಹೇಳ್ದ. ಇಬ್ಬೊರು ಮಾತಾಡಿ ಗೂಡೆನ ಮನೆವ್ಕೆ ತಿಳ್ಸಿದ. ಅಜ್ಜಿ ದಿನ ನಿಗಂಟ್ ಮಾಡಿ, ಅಜ್ಜಿನ ಸಂಬಂದವುಕೆ, ಊರು ಗೌಡಂಗೆ ತಿಳ್ಸಿದ. ಇನ್ನೆಂತ ನಾಳೆ ಗೂಡೆ ನೋಡಿಕೆ ಹೋದುಂತ ಇರ್‌ಕನ ಹಯ್ದ್ ಸುರು ಮಾಡ್ತ್ ಮೇಕಪ್ ಮಾಡಿಕೆ.

ಕಾನ ಕಜೆ ಕಾಯಿ ಗುದ್ದಿ ಕೈಗೆ ಅಂಟಿದೆಲಾ ಹಂಗೆ ಅವನ ಕೆಂಪಾದ ಹಲ್ಲ್‌ನ ಕೆರೆಕೆ, ಅದ್ ಬ್ಲೇಡ್ ಸಾಕಾಗಿತ್ಲೆ, ಕೆರೆಕೆ ಕೊಟ್ಟು (ಹಾರೆ) ಬೇಕಾಗಿತ್ತ್. ಅದ್ ಎಲೆ, ಅಡ್ಕೆನ ಒಟ್ಟಿಗೆ ಜೀವ ಬೇಗ ಹೋಗಲಿಂತ ತಿಂಬ ಹೊಸೆಪುಂದಾಗಿ ಹಂಗೆ, ಆದರ ಕೆರೆತಿತ್ತ್. ಅಂತೂ, ಇಂತೂ, ಅಂದ್ ಬೊಳ್ಪಾತ್.

ಅಜ್ಜಿ ಬೊಳ್ಪುಗೆ ಬೇಗ ಎದ್ದ್ ಹಟ್ಟಿಗೆ ಹಾಲ್ ಕರೆಕೆ ಹೋಕನ ಮಂಜ ಗಡ್ಡತೆಗೆಕೆ

ಸುರು ಮಾಡ್ತ್. ಹೈದ ಪ್ಯಾಂಟ್, ಶರ್ಟ್ ಹಾಕಿ ತಲೆ ಕುದೊಲುನ ಮುಳ್ಳು ಹಂದಿ ಮುಳ್ಳು ಕೆದ್ರಿಸಿದಾಂಗೆ ಕೆದ್ರಿಸಿ ಕೈಗೆ ಅಷ್ಟ್ ದಪ್ಪಲಿ, ಮಂತ್ರಿಸಿ ಕಟ್ಟಿದ ನೂಲುನ ನಂಗೆ ಕಟ್ಟಿತ್. ಅದರ ಒಟ್ಟಿಗೆ ಈ ಮೊದುವೆ ಮನೇಲಿ ಪಾಯ್ಸ್ ಮಾಡಿಕೆ ಕಡಾಯ ಉಟ್ಟಲ ಅದರ ಬಳೆನ ಹಂಗೆ ಇದ್ದ ಬಳೆನ ಹಾಕಂಡಿತ್ತ್. ನಾವು ಹೆಂಗೆ ಇದ್ದರು ಮೊನ್ಸಂಗೆ ಬೇಕಾದ್ ಸ್ಟೈಲ್ ತಾನೇ? ಕಾಲಿಗೆ ಡಾಮರ್ ಡೊಬ್ಬಿಗೆ ಮುಳ್ಗಿಸಿದ ಬೂಟ್ಸ್‌ನ ಹಾಕಂಡಿತ್ತ್. ಮಂಜನ ಸಿಂಗಾರ ಆಕನ ಅಜ್ಜಿನ ಸಿಂಗಾರ ಸುರು ಆತ್.

ಅಜ್ಜಿಗೆ ಹಿಂದೆನ ಕ್ರಮ ಇತ್ತ್. ಅಜ್ಜಿಕಳಂದಲೆ ಮನೆಗಂದು ಶೋಭೆ ತಾನೆ. ಅಜ್ಜಿ ಒಳ್ಳೆ ಝುರಿ ಸೀರೆ ಉಟ್ಟು, ದೊಡ್ಡ ತಲೆ ಸೂಡಿಕಟ್ಟಿ ಹಣೆಗೆ ಕುಂಕುಮ ಬೊಟ್ಟು ಹಾಕಿ, ಮುಂದೆನ ಕ್ರಮ ಹೆಂಗೆ ಇತ್ತ್ ಹಂಗೆನೆ ಹೊರ್ಟ್. ಅಜ್ಜಿಗೆ ಗೊತ್ತಿತ್ತ್. ಆಚಾರ, ವೀಚಾರಗಳ ನಾವು ಬುಟ್ಟ್ ಹೋದರೆ ನಾವ್ಗೆ ಈ ಸಮಾಜಲಿ ಒಳ್ಳೆ ಗೌರವ ಇಲ್ಲೆ, ನಮ್ಮ ದೇಶದ ಸಂಸ್ಕೃತಿನ ಒಳ್ಸಿಕಂಬದ್ ನಮ್ಮ ಕೈಲಿ ಉಟ್ಟುಂತ ತುಂಬಾ ತಿಳ್ದಿದ್ದ ಈ ಅಜ್ಜಿ. ಮನೆಂದ ಹೊರ್ಡಿಕೆ ಮುಂದೆ ಊರು ಗೌಡ್ರು ಎಲ್ಲವರ ಕರ್ದ್ ದೇವರ ಕೋಂಬರೆಗೆ ಹೋಗಿ ದೇವರ ಮುಂದೆ ನಿತ್ತ್ ಬಿನ್ನೆ ಮಾಡಿಕಂಡ ಮೇಲೆ ಎಲ್ಲವು ಜೀಪು ಹತ್ತಿ ಕುದ್ದ.

ಅಜ್ಜಿ ಮತ್ತೆ ಮಂಜ ಜೀಪುನ ಎದುರು ಸೀಟ್‌ನ ಹತ್ತಿ ಕುದ್ದ್‌ಕಂಡ. ಜೀಪು ಹೊರ್ಡಿಕನ ಎಲ್ಲಿ ಇತ್ತೋ! ಗೊತ್ಲೆ ಕೊತ್ತಿ, ಮಿಯಾಂ, ಮಿಯಾಂ,–ಂತ ಮರ್ಬ್ಕಂಡ್ ಜೀಪುನ ಸುತ್ತು ಸುತ್ತು ಬಾತ್ ತಕಣಿ. ಅಜ್ಜಿಗೆ ಸಿಟ್ಟ್ ಬಂದರೆ ಉಟ್ಟಲಾ ಜೀಪುಂದ ಇಳ್ದ ಅಜ್ಜಿ ಜನರ ಕಣ್ಣ್ ಕಟ್ಟ್‌ಗೆ "ಓ ನಾ ಕೊತ್ತಿಗೆ ಹಾಲ್ ಕೋಯಿತ್ಲೆ"–ಂತ ಹೇಳಿ ಜೀಪುಂದ ಇಳ್ದ ಕಥೆನೇ ಬೇರೆ ಆಗಿತ್ತ್. ಒಲೆಲಿ ಇದ್ದ ಸೌದೆಕೊಳ್ಳಿನ ತೆಗ್ದ್ ಕೊತ್ತಿನ ತಲೇಗೆ ಕೊಟ್ಟ್. ಅಲ್ಲಿಂದ ಒಂದೇ ಓಟ ಓಡ್ತ್ ಕೊತ್ತಿ. ಮತ್ತೆ ಅಜ್ಜಿ ಮಣ, ಮಣ ಮಂತ್ರಿಸಿಕಂಡ್ ಬಂದ್ ಜೀಪು ಹತ್ತಿ ಕುದ್ದ. ಜೀಪು ಸುಮಾರ್ ನಾಲ್ಕೈದ್ ಪರ್ಲಾಂಗ ಹೋಕನ ಹೆಂಗ್‌ಸ್ ಸೌದೆ ಹೊತ್ತ್‌ಕಂಡ್ ಜೀಪುನ ಎದ್‌ರ್, ಬಾತ್. ಹೆಂಗ್‌ಸ್‌ನ ನೋಡ್ದ ಅಜ್ಜಿಗೆ ಸಿಟ್ಟ್ ಬಾತ್. "ಥಿ ಇವರ ಕಾಟ ಕಡಿಯಕೆನಾ ಇಂದೇ ಇದ್ ಸೌದೆ ತಾದು." ಮನ್ಸ್‌ಲೇ ಬೊಯಿಕಂಡ. ಇನ್ನ್ ಹಂಞ ದೂರ ಹೋಕನ ಒಂದ್ ಹೆಂಗ್‌ಸ್ ಮನೆ ಮೆಟ್ಟ್ ಕಲ್ಲ್‌ಲಿ ತಲೆ ಹರಂಡಿ ತಲೆ ಬಾಚುದರ ನೋಡಿ ಸುಂದರಿ ಅಜ್ಜಿನ ಮನ್ಸ್‌ಗಾತ್ "ಇಲ್ಲಿಗೆ ಈ ಕಥೆ ಮುಕ್ತ್. ಈ ಧರಿದ್ರಗಳ ನೋಡಿಕಂಡ್ ಒಳ್ಳೆ ಕಾರ್ಯಕೆ ಹೋದರೆ ಯಾಗೊಳ್ ಅಪಸಕುನ"ಂತ ನೆನ್ಸಿಕಂಡ್ ಇದ್ದಾಂಗೆ ಅಜ್ಜಿನ ತೌವ್ರು ಹಕ್ಕಲೆ. ಗೂಡೆನ ಮನೆ ಜಾಲ್‌ಗೆ ಬಂದದೇ ಗೊತ್ತಾತ್ಲೆ. ಅಂದ್ ಹೊಸ ನೆಂಟ್ರ್ ಹೋಕನ ನೀರ್ ಚೊಂಬುನ ಒಟ್ಟಿಗೆ ಹೆಣ್ಮ್‌ಕ್ಕ ಹೊರಗೆ ಬಂದರೆ, ಈ ಹೆಣ್ಮ್‌ಕ್ಕ ಬರೇ ನಮಸ್ತೆ ಹೇಳಿಕಂಡ್ ಬರ್ತಿದ್ದ. ಕುದ್ರಿಕೆ (ಮೊಂದ್ರಿ) ಚಾಪೆ ಕೊಡ್‌ತ್ತಿದ್ದ. ಅಂದ್ ಇವು ಮೆತ್ತನೆ ಸೋಪ ಸಟ್ಟ್ ಕಡೆ ಕೈ ತೊರ್ಸಿದ. ಈಗ ಅಜ್ಜಿಗು, ಮಂಜಗು ಗೂಡೆನ ಕಡೆಗೆನೆ ಕಣ್ಣ್ ಬೀಳ್ತಿತ್ತ್. ಗೂಡೆನ ಕಥೆ ಕೇಳಿ ಸುಖ ಇತ್ಲೆ. ಗೂಡೆ ಒಳೆಗೆಂದ, ಹೊರಗೆ

ಬಾಕನ ಲಟಾ, ಪಟಾ, ಲಟಾ, ಪಟಾ,ಂತ ಸದ್ದ್ ಕೇಳ್ತಿತ್ತ್. ಆಗ ಅಜ್ಜಿಗೆ "ಏ ಇದೆಂತ! ಆನೆಗ ಬಾಳೆ ಮುರಿಯಕೆ, ಬಂದಾಂಗೆ ಸದ್ದ್ ಕೇಳ್ದೆ? ಎಂತ ಕಥೆ ಇದ್?" ಹಿಂದೆ, ಮುಂದೆ ಅಜ್ಜಿ ನೋಡುಕನ ಗೂಡೆನ ಕಾಲ್‌ಲಿ ಅಷ್ಟ್ ಎತ್ತರದ ಚಪ್ಪಲ್, ಅದರ ಅಡಿಲಿ ಮರದ ಗೂಟನ ಹಂಗೆ ಅಷ್ಟ್ ಎತ್ತರ ಇತ್ತ್. ಮತ್ತೆ ತಲೆ ಕೂದೊಲು ನೋಡಿರೆ ಮರ ಕಾಲೆನ ಹಂಗೆ ಇಡೀ ಹರಂಡಿ ಕಂಡ್ ಇತ್ತ್. ಹಣೆಗೆ ಹರ್ಕೆ ಸಂದಾಯಕೆ ಸಣ್ಣ ಚುಕ್ಕಿ ಇತ್ತ್. ಮೂಕುಲಿ! ಹಿಂದೆ ಹಂದಿನ ಮೂಕು ಚುರ್ದು ಕೊಂಡಳ ಹಾಕಿದ ಹಂಗೆ, ಹಾಕಿತ್ತ್. ಮುಂದೆಲ್ಲ ಭತ್ತ ಮಿಜಿಯಕೆ ಒಣ್ಕೆಂತ ಇತ್ತ್ ಆ ಒಣ್ಕೆ ಕೊಡಿಲಿ ಒಂದ್ ಬಳೆನ ಹಂಗೆ ಇತ್ತ್, ಅಂತ ಒಂದ್ ಖಡ್ಗ್ ಹಾಕಿತ್ತ್. ಅವಳ ಕೈ ನೋಡ್ರೆ ಹುಲಿ ಉಂಗುರುನ ಹಾಂಗೆ, ಅಷ್ಟ್ ಉದ್ದ ಉಗುರು ಇತ್ತ್. ಯಾರಿಗಾದ್ರ್ ತಾಂಗಿರೆ ಅವನ ಕಥೇ ಮುಗಿವ ಹಂಗೆ ಇತ್ತ್. ಮತ್ತೆ ಅವಳ ತುಟಿ ಅಲ್ಲ ಅದ್, ತೊಂಡೆ ಹಣ್ಣ್, ಕುರೆಗ ಜಾಜಿ ಕಲ್ಲ್ ಅರ್ದ್ ಮೋರೆಗೆ ಮೆತ್ತಿದ ಹಂಗೆ ಇತ್ತ್. ಮತ್ತೆ ಅವಳ್ ಹಾಕಿದ ಬಟ್ಟೆ ಅಲ್ಲೆಲ್ಲಿ ಹರ್ಕ್ಂಡ್, ಅದ್ ಈಗನ ಪ್ಯಾಷನ್ ಗಡ.

ಎಂತದೋ ಎನೋ? ಕಾಲ ಬದಲಾದ ಹಂಗೆ ಮೊನ್ಸರ ಬದಲಾಗಳ. ಸೀರೆನ ಜಾಗಲಿ, ಫ್ಯಾಂಟ್ ಶರ್ಟ್ ಬಂದುಟು. ನಾಗರ ಜಡೆ, ಹೋಗಿ ನಾಯಿ ಬಾಲ ಆತ್. ಮೂಕು, ಕೈಗೆ ಬಳೆ ಕಾಣದೆ ಅದೆಷ್ಟೋ ವರ್ಷ ಆತೋ ದೇವ್ರಿಗೆ ಗೊತ್ತ್. ಅಲ್ಲಾ ಈ ಗೂಡೆ ಸೀರೆ ಉಟ್ಟು ತಲೆಕೂದೊಲುನ ಉದ್ದ ಜಡೆ ಮಾಡಿ ಅಂದ್ ಅಷ್ಟ್ ಪೊರ್ಲು ಕಾಂಬ ಈ ಚೆಲ್ವೆ. ಈ ನಾಯಿ ಕೋಲಗಳ ಮಾಡಿಕಂಡುಟು ಇನ್ ಇವಳ ನಮ್ಮ ಮನೆಗೆ ತಂದರೆ ಬೇರೆವ್ಕೆ ನೆಗಾಡಿಕೆ ಲಾಯ್ಕ ಆತ್. ನಮ್ಮ ಆಚಾರ, ವಿಚಾರಕ್ಕೆ ತೊಂದರೆ ಅದುಂತ ನೆನ್ಸಿದ ಅಜ್ಜಿ ಈಗಳೇ ಈ ಗೂಡೆ ಹಿಂಗೆ ಮಾಡಿರೆ ನಮ್ಮ ಮನೆಗೆ ತಂದ ಮೇಲೆ ದೊಡ್ಡವರ ಮಾತಿಗೆ ಬೆಲೆ ಕೊಡಿಕಿಲೆ ಈಗಳೆ ಹಿಂಗೆ ಆದರೆ ಇನ್ನ್ ಮುಂದೆಗೆ ಹಿಂಗೆ ಮಾಡಿರೆ ದೊಡ್ಡವರ ಮಾತಿಗೆ ಗೌರವ ಕೊಡಿಕಿಲೆ ಹಿಂಗೆ ಆದರೆ ಮುಂದೆ ಇದುವೆ ಸಂಸ್ಕೃತಿ. ನಮ್ಮಲ್ಲಿ ಬೆಳೆದುಂತ ನೆನ್ಸಿದ ಅಜ್ಜಿ. ತಿರ್ಗಿಸ ಆಕಡೆ ಮೋರೆ ತೋರ್ಸದೆ ನಮ್ಮ ಹೈದಂಗೆ ಬೇರೆ ಗೂಡೆನ ನೋಡಿ ಮೊದುವೆ ಆಕೆ ಗೂಡೆಗೇನ್ ಬರ ಆವುಟು–ಂತ. ಜೀಪು ಹತ್ತಿ ಸೀದಾ ಮನೆ ಕಡೆ ಹೊರ್ಟ್..

* * * * * *

# ಹೊಸ ಬೊದ್ಕ್

ಹಂಞ ಹೊತ್ತು ಹಳೆ ನೆನ್ಪುಗಳ ನೆನ್ಸಿಕಂಡ್ ಕುದ್ದ್, ಬಚ್ಚಲ್ ಮನೆಗೆ ಹೋಗಿ ಕೈ, ಕಾಲ್, ಮೋರೆ, ತೊಳ್ಕ್ಂಡ್ ಬಂದ್ ಗ್ಲಾಸ್‌ಲಿ ಕಾಫಿ ತಕಂಡ್ ಬಂದ್ ಸೋಪಾಕೆ "ಅಬ್ಬಾ!"–ಂತ ಒರ್ಗಿತ್ತ್. ಆಚೆ, ಈಚೆ, ಮನೆಗಳ್ಂದ ಗಂಡ, ಹೆಣ್ಣ್, ರಿಕ್ಷ ಇಳ್ದ್, ಗೇಟ್ ತೆಗ್ದ್, ಅಂಗಳದೊಳಗೆ ಹೋಕನ, ಅಲ್ಲಿಂದ ಅವ್ಕಾಗಿ ಮಕ್ಕ ಬೀಸುವ ಕೈಗಳ ಕಂಡ್ ಏನೋ ಕುಸಿ.

"ಛೆ ನನ್ನವು–ಂತ ನಂಗೆ ಇದ್ದಿದ್ದರೆ! ತೊಬ್ಬಿಕಂಬನ ಆಗುವ ಕುಸಿಂದ ಇನ್ನ್ ಬೇರೆ ಯಾವ ಕುಸಿ ಉಟ್ಟು?" ಚಂಡಿ ಆದ ಕೆನ್ನೆನ ಸೆರಂಗ್ ಕೊಡಿಂದ ಒರ್ಸಿದ, ವರ್ಷ–ಂಗೆ ಕಾಪಿ ಮುಗ್ದದ್ದ್ ಗೋತ್ತಾತ್ಲೆ.

ಅವಳ ಮನ್ಸ್ ಬಿಳಿ ನೀರ್ ಆಗದೆ, ಕೆಸ್‌ರ್ ತುಂಬಿದ ಕನ್ಕ್ ನೀರಾತ್. ಈಗ ಅವಳಿಗೆ ಸಿಕ್ಕಾಪಟ್ಟೆ ತಲೆ ಬಿಸಿ. ಇಷ್ಟ್ ಕಾಲ ಯಾವುದೂ ನೆನ್ಪ್ ಇತ್ಲೆ. ಈಗ ಮೊದುವೆ ಆಕೆ ಹೈದ ಎಲ್ಲಿಟು? ಪ್ರೀತಿಸಿದ ಹೈದ ಕೈ ಕೊಟ್ಟತ್. ಎಷ್ಟೊ ವರ್ಷ ಕಳ್ದವಳ ಹಂಗೆ ನೆನ್ಸಿಕಣ್‌ತ್.

"ನಾ ಹುಟ್ಟಿದಲಿಂದ ಸಾಯುವವರೆಗೆ ಹಿಂಗೆ ಇದ್ದನೆನಾ!" ಕೈಲಿ ಒಂದ್ ಕೂಸು, ಜವಬ್ದಾರಿ ತಕಂಬ ಗಂಡ ಇರ್ತಿದ್ದರೆ, ಯಾಕೆ ಬೇಕಾಗಿ ನಾ ಇಲ್ಲಿ ಇರ್ತಿದ್ದೆ? ಈ ಮೊಣ್ಣುನ ಮೇಲೆ ನನ್ನ ಹಂಗೆ ಯಾರ್ ಒಳ? ಸತ್ತರೆ ಮರ್ಗ್ಡೊವು ಇಲ್ಲೆ, ಬೊದ್ಕಿರೆ ನೆಗಾಡವು ಇಲ್ಲೆ, ಯಾಗೋಳು ನನ್ನ ಜೀವಮಾನ ಹಿಂಗೆನೆ ಇರ್ದ್! "ಛೆ! ಅಂದ್ ಆಸ್ತಿನ ಪಾಲಿಗಾಗಿ ಸಣಪನ ಮಕ್ಕ ಬಂದ್ ಅಪ್ಪ, ಅಮ್ಮಂಗೆ ಚೂರಿ ಹಾಕ್‌ಕನ ನಾ ಅಕ್ಕಿ ಗೋಣಿ ಅಡ್ಡ ಅಂಡ್ಗಿ

ಕುದ್ದದ್ ತಪ್ಪಾತ್. ನಾನು ಎದುರು ನಿತ್ತಿದ್ದರೆ! ನನ್ನ ಜೀವ ಕೂಡ ಅಂದೇ ಅಪ್ಪ, ಅಮ್ಮನ ಒಟ್ಟಿಗೆ ಹೋಗ್ತಿತ್ತ್. ಜೀವದ ಮರ್ಕ್ಕೆ ಅಪ್ಪ ಓಡ್ಕನ ತೊಳ್ಸಿ ಕಟ್ಟಿಗೆ ಎಡ್ಗಿ ತೋಟಕೆ ರೆಟ್ಟಿದ ರಭಸ, ಹೊಣ್ಕಿದ ಜಾಗೆ, ಅರ್ದ ರಕ್ತ, ಎದೆಗೆ ತಾಂಗಿದ ಚೂರಿ ಬೀಸಿ ಬೆನ್ನ್‌ಲಿ ಸೆಕ್ಕಿದ್, ಒಂದ್ ಪುಂಡಿನಷ್ಟ್ ತಲೆ ಕುದೊಲು ಕಿತ್ತ್ ಬಂದದ್, ಊಟಕೆ ಕುದ್ದ ಬಾಳೆ ಎಲೆ ಮೇಲೆ ಅಮ್ಮ ಹೊಣ್ಕಿದ್, ತಾಳಿ ಚೈನ್ ಅಮ್ಮನ ಕುತ್ತಿಗೆ ಒಳಗೆ ಹುಕ್ಕ್ ಹೋದ್, ಜೀವ ಹೋಕನ ಅಕ್ಕ್ಕಾ,,,–ಂತ ಕರ್ದದ್. ಇದೆಲ್ಲ ಒಂದರ ಮೇಲೆ ಒಂದೊಂದ್ ಮಾಲೆ, ಮಾಲೆ, ಅಗಿ ಅವಳ ಮನ್ಸ್ ಒಳಗೆ ನೆನ್ಪ್ ಆಗ್ತಿತ್ತ್. ಗೋಡೆಲಿ ತೂಗು ಹಾಕಿದ, ಗೋಡೆ ಗಡಿಯಾರದ ಡಣ್ಣ್– ಢಣ್ಣ್ ಸದ್ದ್ ಕೇಳಿ. "ಓ ಆಫೀಸ್ಗೆ ಹೋಗುವ ಹೊತ್ತಾತ್." ಎದ್ದ್ ಅಡ್ಗೆ ಕೋಣೆಗೆ ಹೋಗಿ ಬಿಸಿ, ಬಿಸಿ, ಗಂಜಿ ಹಾಕಂಡ್ ಬಂದ ಬಟ್ಲ್‌ನ, ಪ್ಯಾನ್ ಅಡಿಲಿ ಹಿಡ್ದ್ ಕುದ್ದಿತ್. ಒಂದ್ ಪುಂಡಿ ಗಂಜಿನೂ ಸೇರ್‌ತ್ಲೆ ವರ್ಷಂಗೆ.

ಹಂಗೆ ಕೈ ಮೊರೆ ತೊಳ್ಕಂಡ್ ಮಾಯಪುರ ಬಸ್ಸ್ ಸ್ಟ್ಯಾಂಡ್‌ಗೆ ಹೋಗಿ ಬಸ್ಸ್ ಹತ್ತಿತ್. ಆಗಳೇ ಸುಮಾರ್ ಹನ್ನೊಂದು ಹನ್ನೊಂದ್‌ವರೆ ಗಂಟೆ ಆಗಿತ್ತ್. ಬಸ್ಸ್ ಹೋಕೆ ಇನ್ನೂ ಹತ್ತ್– ಇಪ್ಪತ್ ನಿಮಿಷ ಇತ್ತ್. ಉರಿ ಬಿಸಿಲ್ ಕಡ್ಮೆ ಆತ್ಲೆ. ಬಿಸಿಲ್ ಪೆಟ್ಟಿಗೆ ತಲೆ ಬೇನೆ ಸುರು ಆಗಿ, ಕೈಲಿ ಇದ್ದ ಅವಳ ಚೀಲಕ್ಕೆ ತಲೆನ ಬೊಗಗ್ಗಿಸಿ ಮಲ್ಗಿತ್. ಅಷ್ಟ್ ಹೊತ್ತುಲಿ.

"ಅನಾಥ ಮಗುವಾದೆ ನಾನು...... ಅಪ್ಪನು ಅಮ್ಮನು ಇಲ್ಲ"......... ಅವಳ ಕೆಬಿಗೆ ಅಂಟಿ ಕಂಬ ಹಾಡ್ ಕೇಳ್ತ್. ಕೂಡ್ಲೆ ಎಚ್ಚರ ಆಗಿ ಕುದ್ದಲಿಂದ ಸುತ್ತ ಮುತ್ತ ನೋಡ್ದ ವರ್ಷಂಗೆ ಯಾರೂ ಕಂಡತ್ಲೆ.

ಹಾಡ್ ನಿತ್ತ್ ಹೋಗಿತ್ತ್. "ಛೆ! ಯಾರ್ ಆಗಿರ್ದು ಈ ಹಾಡ್ನ ಹೇಳವು? ನಂಗೆ ಅಪ್ಪ, ಅಮ್ಮ, ಇಲ್ಲೆ, ನನ್ನ ಮನ್ಸ್‌ಗೆ ಬೇನೆ ಆಗಲಿಂತ ನನ್ನ ತಮಾಷೆ ಮಾಡ್ತಾ ಒಳನ! ವರ್ಷನ ಮನ್ಸ್ ಹೆತ್ತವರ ಕಡೆ ಹರ್ತ್. ಮತ್ತೆ ಅದೇ ಚೀಲಕೆ ತಲೆನ ಬೊಗ್ಗಿಸಿ ಮಲ್ಗಿತ್. ಕಣ್ಣ್‌ಗೆ ನಿದ್ದೆ ಅಡ್ಡ ಬಂದಿತ್ತ್. ಅದೇ ರಾಗ ಮತ್ತೊಮ್ಮೆ ಅವಳ ಕೆಬಿಗೆ ಬೀತ್. ಎದ್ದ್ ನಿತ್ತ್ ಇಡೀ ಬಸ್ಸ್‌ನ ಒಳಗೆ ಅವಳ ದೃಷ್ಟಿನ ಹರ್ಸಿತ್. ಸುಟ್ಟು ಹೋಗಿ ಕಪ್ಪಾದ ಮೋರೆ, ಹರ್ದ ಮುಕ್ಕಾಲ್ ಪ್ಯಾಂಟ್, ತಲೆಲಿ ಗಂಟ್ ಹಾಕಿದ ಕುದೋಲು, ಇಳ್ಕಂಡ್ ಇದ್ದ ಗಡ್ಡ, ತುಂಡು ಕೊಡೆ, ಊರುವ ದೊಣ್ಣೆ, ಹೆಗ್‌ಲ್‌ಲಿ ಮೊಸಿ ಮೆತ್ತಿದ ಚೀಲ, ಅರ್ಧ, ಮರ್ಧ, ಬುಡುವ ಕಣ್ಣ್, ಕೈಲಿ ಸಣ್ಣ ಪಿಂಜಣಿ, ಹಿಡ್ಕಂಡ್ ಇದ್ದ ಬಿಕ್ಷುಕನ ನೋಡ್ತ್. ಅವನ ಪಿಂಜಣಿಗೆ ಬೀಳುವ ಚಿಲ್ಲರೆ ದುಡ್ಡು ಅವಳ ತಲೆ ಕೆಡ್ಸಿತ್. ಬಿಕ್ಷುಕ ಬಸ್ಸ್ ಇಳ್ದ್ ಹೋದ ಮೇಲೆ "ಛೆ ನಾನೂ ಅವಂಗೆ ದುಡ್ಡು ಹಾಕಕಾಯ್ತ್"ತ ಅವಳ ಮನ್ಸ್‌ಗೆ ಬೇಜಾರ್ ಆಗಿತ್ತ್.

ಮಾರ್ಗ ಗುಂಡಿ, ಗುಡ್ಡುಂದ ತುಂಬಿ ಹೋಗಿ, ಗಡ್ಕ್ ಗಡ್ಕ್ ಸದ್ದ್‌ನ ಒಟ್ಟಿಗೆ ಹೋಗುವ ಬಸ್ಸ್‌ಂದ ಜನಗ ಕಡ್ಮೆ ಆಗಿದ್ದ. ಕಂಡೆಕ್ಟ್‌ರ್ ಅವಳ ಸೀಟ್‌ನ ಹಕ್ಕಲೆ ಕುದ್ದಿತ್, ಅವಂಗೆ

ಹಂಞ ಪ್ರಾಯ ಆಗಿತ್ತ್. ಅವನ ಮಾತಾಡ್ಸಿದ ವರ್ಷ, ಬಿಕ್ಷುಕನ ಪರಿಚಯ ಕೇಳ್ತ್. "ಅದೊಂದ್ ಕಥೆ ಮಾರಯ್ರ್ರೆ" ಕಥೆ ಹೇಳುವ ರಭಸಲಿ ಬಸ್ಸ್ ಹೋಗ್ತಿತ್ತೆ.

ಅವಂದ್ ಎಲ್ಲಿಂದಲೋ ಬಂದ ಸಂಸಾರ, ಯಾವುದೋ ಕಡೆಗೆ ಕಾರ್‌ಲಿ ಹೋಕು . ಎಡೆ ದಾರಿಲಿ ಕಾರ್ ಅವಘಡ ಆಗಿತ್ತ್. ಅವರ ಸಂಬಂದದವು ಬಂದ್ ಕೆಲವರ ಆಸ್ಪತ್ರೆಗೆ ಕರ್‌ಕಂಡ್ ಹೋಗಿ ಇವನ ಇಲ್ಲೆ ಬುಟ್ಟ್ ಹೋದ. ಈಗ ಇಲ್ಲಿ ಬಿಕ್ಷೆ ಬೇಡಿಕಂಡ್ ಇರ್ದು ಸಾದಾರಣ ವರ್ಷ ಆತ್. ಒಮ್ಮೆಗೆ ಎಲ್ಲ ಹೇಳಿ ಮುಗ್ಸಿತ್. ವರ್ಷ ಇಳಿವ ಬಸ್ಸ್ ಸ್ಟ್ಯಾಂಡ್ ಬಂದಿತ್ತ್. ಆಫೀಸ್‌ಗೆ ಹೋದ ಅವಳ ಮನ್ಸ್, ಸರಿಯಾಗಿ ಕೆಲ್ಸದ ಕಡೆ ಹರಿಯದೆ, ಬಿಕ್ಷುಕನ ಬಗ್ಗೆ ಪ್ರಶ್ನೆ ಹುಟ್ಟ್‌ತ್ತಿತ್ತ್. ಆಫೀಸ್‌ಲಿ ತುಂಬಾ ಕೆಲ್ಸ. ಒಂದ್ ವಾರದ ಮಟ್ಟಿಗೆ ಅವಳ ರೂಂಲಿ ಇರುವ ಹಂಗೆ ಆತ್.

ಶನಿವಾರ ಮನೆ ಕಡೆ ಹೋಕೆ ಅದುವೆ ಬಸ್ಸ್ ಹತ್ತಿ ಕುದ್ದ ಕೂಡ್ಲೆ, ಮತ್ತೆ ಅದೇ ಹಾಡ್ ಅವಳ ಕೆಬಿಲಿ ಕೇಳ್ದ ಹಂಗೆ ಆಗಿ ಬಿಕ್ಷುಕನ ನೆನ್ಪಾತ್. ಇಂದ್ ಆ ಮೊನ್ಸ ಅಲ್ಲೇ ಇದ್ದರೆ ಅವನ ಅನಾಥಲಯಕೆ ಸೇರ್ಸೋಕುಂತ ಆಲೋಚನೆ ಆತ್. ಮನ್ಸ್ ಹೌದುಂತ ಒಪ್ಪಿಕಂಡಿತ್. ಮನ್ಸ್‌ಲಿ ನಿರ್ಧಾರ ತಂದ್ ಕಂಡ ಮೇಲೆ ಹಂಞ ಕುಸಿ ಆತ್.

ಮನೆಗೆ ಹೋಗದೆ ಒಂದ್ ವಾರ ಆಗಿತ್ತ್. ಅವಳಿಗೆ ತಿಳ್ದ ಅನಾತಲಯಕೆ ಸೇರ್ಸಿಕೆ ಅರ್ಜಿ ತಕಂಡ್ ಅಂದ್ ಅರ್ಜೆಂಟಾಗಿ  ಸೀದ ಮನೆ ಕಡೆ ನಡ್ತ್.

ಮಾರನೆ ದಿನ ಒಂದ್ ಗಂಟೆಗೆ, ಮಧ್ಯಾನ ಅದೇ ಬಸ್ಸ್ ಸ್ಟ್ಯಾಂಡ್‌ಗೆ ಹೋಗಿ ಬಿಕ್ಷುಕನ ಹುಡ್ಕಿರೆ ಬೇರೆ ಬಸ್ಸ್‌ಲಿ ಹಾಡ್ ಕೇಳ್ತಿತ್ತ್. ಬಿಕ್ಷುಕ ಬರ್‍ಲಿಂತ ಬಸ್ಸ್ ಸ್ಟ್ಯಾಂಡ್ ಗೋಡೆಗೆ ಒರ್ಗಿ ನಿತ್ತಿತ್ತ್ ವರ್ಷ.

ಇನ್ನೇನ್ ಹಂಞ ಹೊತ್ತುಲಿ ಸ್ಟ್ಯಾಂಡ್ ಒಳೆಗೆ ಬರುವ ಹಂಗೆ ಇದ್ದ ಬಿಕ್ಷುಕ ರೋಡ್ ದಾಟ್‌ಕನ ಅವಂಗೆ ಗೊತ್ತಾಗದ ರೀತಿಲಿ ಬಂದ ಕಾರ್ ಗುದ್ದಿದೇ ತಡ, ಅಷ್ಟ್ ದೂರಕೆ ರೆಟ್ಟಿ ಹೋತ್. ಆ ಹೊತ್ತುಲಿ ಕಾರ್‍ನವ ಎಲ್ಲಿಗೆ ಹೋರ್‍ಟುಟು? ಅಲ್ಲಿಗೆ ಎತ್ತಿ ಆಗಿರ್‍ದು.

ವರ್ಷನ ಎದೆಗೆ ಗಾಯ ಆದವರ ಹಂಗೆ ಅಲ್ಲೆ ಕುದ್ದತ್. ಅಲ್ಲಿ ಇದ್ದ ಜನಗ ಅವನಸುತ್ತ ಸೇರಿರು ಡ್ರೈವರ್, ಕಂಡೆಕ್ಟ್ರ್‌ಗಳಿಗೆ ಜೋಸ್ತಿನ ಹಂಗೆ ಇದ್ದರು ಅವನ ಯಾರೂ ಮುಟ್ಟಿತ್ತೆ. ಜನಗಳ ಎಡೆಂದ "ಅಯ್ಯೋ ಅಶೋಕಾ,,,....... ಅನಾಥ ಆಗಿ ಬಿಕ್ಷೆ ಬೇಡಿ ಬೊದ್ಕಿದ, ಈಗಳೋ ಅನಾಥ ಆಗಿ ಸತ್ತ" ಅಜ್ಜನ ಸ್ವರ ವರ್ಷನ ಕೆಬಿಗೆ ಕೇಳ್ತ್. ಎಲ್ಲಿಂದಲೋ ಬಂದ ಗುಜಿರಿ ಜೀಪು, ಅವನ ಹೆಣ ತಕಂಡ್ ಎಲ್ಲಿಗೋ ಹೋತ್.

ವರ್ಷನ ಕೈಲಿ ಇದ್ದ ಅನಾಥಲಯದ ಅರ್ಜಿ ಗಾಳಿಗೆ ಹಾರಿ ಹೋದ್ ಅವಳಿಗೆ ಗೊತ್ತಾತ್ತೆ. ಚಪ್ಪೆ ಮೋರೆಲಿ ವರ್ಷ ಮನೆ ಕಡೆ ನಡ್ತ್. ಮನೆಗೆ ಹೋಗಿ ಕಣ್ಣಾರೆ ಕಂಡ ಘಟನೆಗಳ ಕಂಡ್ ಅಂದ್ ಅಮ್ಮ ಹೇಳ್ದ ಮಾತ್ ವರ್ಷನ ಕೆಬಿಲಿ ಕೇಳುವ ಹಂಗೆ ಆತ್. "ನಿಂಗು, ಅವಂಗು ಹತ್ತ್ ವರ್ಷದ ಅಜ, ಗಜ. ನೋಡಿಕೆ ತುಂಬ ಪೊರ್‍ಲು ಒಮ್ಮೆ ಅವರ

ಜೋಸ್ತಿಗಳ ಒಟ್ಟಿಗೆ ಸೇರಿಕಂಡ್ ಅಪ್ಪನ ಮಾತ್ ಕೇಳಿಕೆ ಒಪ್ಪದೆ ಅಪ್ಪ ಅಣ್ಣಂಗೆ ಜಗಳ ಆಗಿ ಮನೆ ಬುಟ್ಟ್ ಹೋತ್. ಅವನ ಹುಡ್ಕದ ಜಾಗೆ ಇಲ್ಲೆ. ಅಲ್ಲಿ ನೋಡ್ದೆ, ಇಲ್ಲಿ ನೋಡ್ದೆಂತ ಜನಗ ಹೇಳಿಕೆ ಸುರು ಮಾಡ್ದ. ಹುಡ್ಕಿ, ಹುಡ್ಕಿ ಮೂರು ವರ್ಷ ಕಳ್ದರು ಮನೆಗೆ ಬಾತ್ಲೆ. ಕಡೆಗೆ ಸತ್ತೇ ಹೋಗಿರ್ದುಂತ ಅವನ ನೆನ್ಪೇ ಮರ್ತ್ ಹೋತ್." ಅವಳ ಅಣ್ಣನ ಪೊಟ ಅಮ್ಮನ ಮೊರೆ ಅವಳ ಕಣ್ಣ್‌ಗೆ ಕಂಡಂಗೆ ಆತ್.

"ನನ್ನ ಅಣ್ಣ ಯಾಕೆ ಹಿಂಗೆ ಮಾಡ್ತ್? ಯಾರ ಕೇಳ್ದು? ಹಕ್ಕಲೆ ಮನೆನ ಅಜ್ಜಿನ ಕೇಳಿರೆ ಏನಾದು?." ಒಂದೊಂದೇ ಪ್ರಶ್ನೆಗ ಅವಳ ತಲೆಲಿ ಬೆಳೆತ್ತಿತ್ತ್. ಒಮ್ಮೊಮ್ಮೆ ಅಪ್ಪನ ಮೇಲೆ ಸಿಟ್ಟ್ ಬರ್ತಿತ್ತ್. ಮತ್ತೊಮ್ಮೆ "ಛೆ ಸತ್ತ ಅಪ್ಪನ ಮೇಲೆ ಸಿಟ್ಟ್ ಮಾಡ್ರೆ ಏನ್ ಪ್ರಯೋಜನ? ಆದೆಂತ ಅಂಗಾತನೆ ಹಾಸಿಗೆಲಿ ಬಿದ್ದ್‌ಕಂಡಿತ್ತ್. ಬಾಯಿ ಮುಚ್ಚಿ ಗಂಟ್ಲ್ ಆರಿ ಹೋಗಿ, ಕೈ ಕಾಲ್‌ಲಿ ಇದ್ದ ಶಕ್ತಿ ಕಡ್ಮೆ ಆಗಿ ಹಿಂಬೊತ್ತ್ ನಾಲ್ಕ್ ಗಂಟೆ ಆದರು ಹಾಸಿಗೆಂದ ಎದ್ರಿಕೆ ಆತ್ಲೆ. ನಾಲ್ಕೈದ್ ಸರ್ತಿ ಆಚೆ, ಈಚೆ, ಹೋಣ್ಕಿರ್ಕೆ, ಮುಚ್ಚಿಕಂಡ ಕಣ್ಣ್‌ಗ ಬೊಳ್ಪು ನೋಡಿಕೆ ಬೇಜಾರ್ ಆಗಿ ಕಣ್ಣ್ ಒಪ್ಪಿತ್ಲೆ. "ಯಾಕೆ?" ಮನ್ಸ್‌ಲಿ ಪ್ರಶ್ನೆಗ ನಿತ್ತಿತ್ತ್. "ಹೌದ್ ಅಂದ್ ನಾ ಪ್ರೀತಿಸಿದ ಹಯ್ದ ಮತ್ತೆ ನಾ ಒಟ್ಟಿಗೆ ಕುದ್ದ್ ನಮ್ಮ ಪ್ರೀತಿಗಳ ಹೇಳಿಕಂಡ ಮೇಲೆ ನಮ್ಮ ಇಬ್ಬರ ಮನ್ಸ್‌ಗ ಒಂದೇ ಆಗಿತ್ತ್.

ಕಡೆನ ಮಾತಾಗಿ ಬಂದದ್ದ್ ಅವನ ಕಣ್ಣ್‌ನ ವಿಷಯ. ನನ್ನ ಮೊದುವೆ ಆಗುವ ಹಯ್ದಂಗೆ ಯಾವ ಕೊರ್ತೆ ಇಲ್ಲದಾಂಗೆ ಬೇಕುಂತ ಅವಂಗೆ ಬೇಕಾಗಿ ಇದ್ದ ದುಡ್ಡುನ ಖರ್ಚಿ ಮಾಡಿ ಅವನ ಕಣ್ಣ್ ಕಾಂಬಕೆ ಆತ್. ಮತ್ತೆ ನನ್ನ ದೂರ ಮಾಡ್ತ್." ಅಪ್ಪ ಅಮ್ಮನ ಜಿವ ನನ್ನ ಕೆಣೆದ್‌ರ್ ಹೋತ್. ಇನ್ನ್ ಹುಟ್ಟಿದ ಅಣ್ಣನ ಮೋರೆನೆ ನೋಡ್ತ್‌ಲೆ. ಅವಳ ಮನ್ಸ್‌ಲಿ ಒಂದೊಂದೆ ಬೇನೆಗ ಎದ್ದ್ ಕಾಂಬುತಿತ್ತ್. ಅಷ್ಟ್ ಹೊತ್ಲಿ ರೋಡ್‌ಲಿ ಓಡಾಡುವ ವಾಹನಗಳ ಸದ್ದ್ ಜನಗಳ ಮಾತ್ ಇದೆಲ್ಲ ಅವಳ ಕೆಬಿಗೆ ಕೇಳ್ತಿತ್ತ್.

ಹೊರಗೆ ಎದ್ದ್ ಬಂದ ವರ್ಷ ಟ್ಯಾರೀಸ್ ಮೇಲೆ ಹೋಗಿ ನಿತ್ತ್ ಸುತ್ತ ಸುತ್ತಳೊ ಜನಗಳ ಕಂಡರೆ, ಅದ್ಯಾವುದು ಅವಳ ಮನ್ಸ್‌ಗೆ ಬಾತ್ಲೆ. ಮನ್ಸ್ ಕರೆತಿತ್ತ್ ಬೇಜಾರ್ನ ಮಳೆಗಳ. "ಇಷ್ಟೇಲ್ಲ, ಸಾವು ಬೇನೆಗಳ ನನ್ನ ಕಣ್ಣಾರೆ ಕಂಡ್ ನಂಗೆ ಬೇಕಾದವರ ಕಳ್ಕಂಡ ಮೇಲೆ ಇನ್ನ್ ಬೊದ್ಕಿ ಏನ ಪ್ರಯೋಜನ? ಟ್ಯಾರೀಸ್ ಮೇಲೆ ನಿತ್ತ ಕೂಡ್ಲೆ ಅವಳ ಮನ್ಸಿಗಾತ್. ಸಡನ್ನೆ ಕೆಳೆಗೆ ಹಾರಿರೆ? ಮನ್ಸ್ ಒಪ್ಪಿತ್ಲೆ. ಹಂಗೆ ಮಾಡ್ರೆ ಏನ್ ಸಾದಿಸಿದಾಂಗೆ ಆದೆ? ಒಂದ್ ಮನ್ಸ್ ಹೇಳ್ತ್ "ಜೀವನಲಿ ಕಷ್ಟ ಬಾಕನ ಸತ್ತರೆ ಆದು-ಂತ". ಇನ್ನೊಂದ್ ಮನ್ಸ್ ಹೇಳ್ತ್ ಸಾಯುದು ಸುಲಭ. ಸತ್ತಮೇಲೆ ಬೊದ್ಕಿಕೆ ಆದೆನಾ? ಇದರೆಲ್ಲ ಮರ್ತ್ ಬುಡು, ಮರಿಯಕೆ ಆಗದಿದ್ದರೆ ಬೊದ್ಕುದು ಸಾಧ್ಯನಾ?" ಹೌದುಂತ ಶಾಂರಾಯರ ಪೋನ್ ನಂಬರ್ ವರ್ಷನ ಮೊಬೈಲ್‌ಲಿ ಬಿತ್. "ಮಹಾರಾಷ್ಟ್ರದ ಒಬ್ಬ ಹಯ್ದ್ ಬಂದುಟು, ಕನ್ನಡ ಮತಾಡ್ದೆ ಪರಿಚಯ ಕೇಳ್ದೆ ಹತ್ತ್. ಹನ್ನೇರಡ್ ವರ್ಷಗಳ ಹಿಂದೆ ಮನೆ ಬುಟ್ಟ್

ಹೋದ. ನಿನ್ನ ಅಣ್ಣ ಅಶೋಕನ ಹಂಗೆ ಕಂಡದೆ.

ಈಗ ಅನಿಲ್‌ಂತ ಮಾಡಿಕಂಡುಟು. ಅಶೋಕನೇ ಆಗಿರ್ದು–ಂತ ಅಂದಾಜಿನ ಮೇಲೆ ನಿನ್ನ ಪರಿಚಯ ಹೇಳ್ದೆ. ಈಗ ನಿನ್ನ ಮಾತಾಡ್ಸಿಕೆ–ಂತ ನಿನ್ನ ಮನೆ ಕಡೆ ಬಂದದೆ." ಶ್ಯಾಂರಾಯ ಫೋನ್ ಕೆಳಗಿಸಿದ. ಶ್ಯಾಂರಾಯರ ಮಾತ್–ಂತ ಹೇಳಿರೆ ಸಾಧಾರಣ ಜನಗ ನಂಬುತ್ತಿದ್ದ.

ವರ್ಷ ಅವಳ ಮನೆ ಗೇಟ್ ಹಕ್ಕಲೆ, ಎರಡ್ ಗಂಟೆವರೆಗೆ ಅವಂಗಾಗಿ ಕುದ್ದ್ ಸುಸ್ತು ಆದವಳ ಹಂಗೆ ಆಗಿತ್ತ್. " ನಾ ಎರಡ್ ಗಂಟೆಂದ ಕಾಯುತ್ತಾ ಒಳೆ. ಗಂಟೆ ನಾಲ್ಕ್ ಆತ್. ಈ ಅಣ್ಣ ಇನ್ನೂ ಕಾಂಬೊದ್ಲೆ !", ನಿತ್ತಲ್ಲಿ ನಿಲ್ಲಿಕೆ ಆಗದೇ ಕುದ್ದಲ್ಲಿ ಕುದ್ರಿಕೆ ಆಗದೆ, ಆಚೆ ಇಚೆ ನೋಡಿಕೆ ಸುರು ಮಾಡ್ತ್.

" ಕಳ್ದ್ ಹೋದ ಅಣ್ಣ ಈಗ ಬಂದದೆ." ಹೊಸ ಆಸೆ ಹೊತ್ತ ವರ್ಷ ಅಣ್ಣಂಗಾಗಿ ಅವಳ ಎರಡ್ ಕಣ್ಣ್‌ನ ಮುಚ್ಚಿಕಂಡ್ ದೇವರ ನೆನೆತಿತ್ತ್. ಎಲ್ಲಿದಾರಿ ತಪ್ಪಿ ಹೋತ್? ಅನ್ನುವ ಹೆದ್ರಿಕೆಂದ ಒಮ್ಮೆಕಣ್ಣ್ ಬುಟ್ಟ್ ನೋಡುವ ಹೊತ್ತ್‌ಲಿ ದೇವರು ಕಂಡ ರೀತಿಲಿ ಅಣ್ಣ ನಿತ್ತಿತ್ತ್.

ಅವಳ ಬಿಳಿ ಆದ ಮೋರೆ ಹೊಳ್ಳುವ ಕಣ್ಣ್, ಆಸೆ ಹೊತ್ತ ಹೃದಯ ನ ನೋಡಿ ಅವಂಗೆ ವರ್ಷನ ಮೇಲೆ ಪ್ರೀತಿ ಹುಟ್ಟಿ " ನಾ ಮಾಡ್ದ ತಪ್ಪುನ ಕ್ಷಮಿಸ್ ತಂಗೆ" ಅವಳ ಕಣ್ಣ್‌ಂದ ಹರ್ದ ನೀರ್ ಅದ್ ಪನ್ನೀರ್ ಆಗಿ ನೆಲಕೆ ಬೀತ್, "ನನ್ನ ಅಮ್ಮನ ಹೊಟ್ಟೆಲಿ ಹುಟ್ಟಿದ ಕೂಸು ನೀ." ಅವಳ ಮನ್ಸ್‌ಗೆ ಒಮ್ಮೆಗೆ ಕುಸಿ, ಬೇಜರ್ ಎರಡ್ ಸೇರಿಕಂಡ್ ಅಚ್ಚರಿ ಹುಟ್ಟಿ ಕಂಡಿತ್.

'ತಂಗೆ ನನ್ನ ಅಮ್ಮನ ಹೊಟ್ಟೆಲಿ ನಾ ಹೆಂಗೆ ಬೆಳ್ದ್ ಬಂದೆ ಅದೇ ತರಲಿ ನೀನು ಕೂಡ ಹುಟ್ಟಿ ಬೆಳ್ದ್ ಬಂದ ಸಣ್ಣ ಕೂಸು ನೀ' ವರ್ಷನ ಎರಡ್ ಕೈಗಳ ಹಿಡ್ದ್ ಹೇಳ್ತ್. ಅವಳ ಮನ್ಸ್‌ಗೆ ಅಣ್ಣನ ಕುಸಿ ಪಡ್ಸಿಕೆ ಅವಂಗೆ ಬೇಕಾದ ಹಂಗೆ ಉಂಬಕೆ, ತಿಂಬಕೆ ಎಲ್ಲದರ ಮಾಡಿ ಕೊಟ್ಟ್ ಅವನ ಕುಸಿಲಿ ಇರುವ ಹಂಗೆ ಮಾಡ್ತ್. ಆದರೆ ಅವನ ಮನ್ಸ್ ಏನೋ.. ತಪ್ಪು ದಾರಿ ಹಿಡ್ದ್‌ವನ ಹಂಗೆ ಮೋರೆಲಿ ಎದ್ದ್ ಕಾಣ್ತ್ತಿತ್ತ್. " ಯಾಕೆ ಅಣ್ಣ? ನೀ ನಿನ್ನ ಮನೆಗೆ ಬಂದರು ಬೇಜಾರ್–ಲಿ ಒಳ" ವರ್ಷನ ಕಡೆ ತಿರ್ಗಿ ನೋಡಿ "ನಾ ಅಂದೆನೋ ತಪ್ಪಾಗಿ ನಡ್ದ್ ಅಪ್ಪನ ಮಾತಿಗೆ ಎದುರು ಉತ್ತರ ಕೊಟ್ಟಿರುವೆ. ಅದರ ಪ್ರತಿಫಲಕೆ ನಾ ಊರುರು ತಿರ್ಗಿದೆ. ಆದರೆ ಅಪ್ಪ ಸಾಯಕನ ನಂಗೆ–ಂತ ಏನೂ ಕೊಟ್ಟತ್ಲೆ. ಎಲ್ಲ ಜಾಗೆನ ನಿನ್ನ ಹೆಸ್ರ್‌ಗೆ ಬರ್ದ್ ಹಾಕಳ. ನನ್ನ ಖರ್ಚಿಗೆ ಯಾವುದೂ ಇಲ್ಲೆ"

"ಅಣ್ಣ ನಮ್ಮ ಅಪ್ಪ ನಿಂಗೆ ಅಂತ ಮೋಸ ಮಾಡ್‌ತ್ಲೆ. ಇನ್ನೊಂದ್ ಕಡೆ ಇರುವ ಜಾಗೆ, ಮನೆನ ನಿನ್ನ ಹೆಸ್ರ್‌ಗೆ ವಿಲ್ ಮಾಡಿ ಇಸಿಳೊ " ಅರ್ಳಿದ ಮೋರೆಲಿ ಹೇಳ್ತ್. ಇವಳ ಮಾತ್‌ಲಿ ಒಂದ್ ತಪ್ಪುನ ಕೂಡ ಕಂಡ್ ಹಿಡಿಯಕೆ ಆಗದೆ, "ಇನ್ನ್ ಇವಳ ಮನ್ಸ್‌ಲಿ,

ನಾನೇ ತಪ್ಪಾಗಿ ಕಾಂಬೊದ್ ಸರಿ ಅಲ್ಲ. ನನ್ನ ನಿಜ ಕಥೆನ ಹೇಳಿಯೇ ಹೇಳೊಕ್, ಇಲ್ಲದಿದ್ದರೆ ಈ ಸಮಾಜಲಿ ಕೆಟ್ಟ ಮೊನ್ಸ್–ನ ಹಂಗೆ ಆಗಿದ್ದನೆ. ಇವಳ ಇಷ್ಟ್ ಒಳ್ಳ ಮನ್ಸ್‌ಗೆ ಬಿಸಿ ನೀರ್ ಹಾಕಿ ಇವಳ ರುಣನ ತಿಂದ್ ಕಂಡ್ ಬೊದ್ಕಿರೆ ಅದ್ ನಿಜವಾದ ಜೀವನ ಅಲ್ಲ. ಒಂದ್ ವೇಳೆ ನಾ ಹಿಂಗೆ ಮಾಡಿರೆ, ಹೆಣ್ಣ್ ಸಂಸಾರಕ್ಕೇ ಅವಮಾನ ಮಾಡ್ದ ಹಂಗೆ ಆದೆ. ಇನ್ನ್ ನಾವ್ಗೆ ಹುಟ್ಟುವ ಮಕ್ಕಳಿಗೂ ಶಾಪ ಆಗಿ ನಿತ್ತದೆ–ಂತ ಅಣ್ಣನ ಸ್ಥಾನ ಬದಲ್ಸಿ "ವರ್ಷ ಈಗ ನಾ ಬಂದದ್ ನಿನ್ನ ನೋಡಿಕೆನಾ? ನಿನ್ನ ಒಟ್ಟಿಗೆ ಇರಿಕೆನ? ಅವಳ ಹಕ್ಕಲೆ ಬಂದ್ ಕೇಳ್ತ್. ಕಳ್ಕಂಡ ಅಣ್ಣ ಬಂದ್ ನಂಗೆ ಸಂಸಾರ ಒಳ–ಂತ ಗೊತ್ತು ಮಾಡ್ದ್, ನೀನೇ ನನ್ನ ಅಣ್ಣ–ಂತ ಅವನ ಕೈಗಳ ಗಟ್ಟಿ ಹಿಡ್ದ್ ಮರ್ಬ್ತ್. "ವರ್ಷ ಅಣ್ಣ– ತಂಗೆಂತ ಹೇಳಿರೆ ಅದ್ ರಕ್ತ ಸಂಬಂದ ಆಗಿರೊಕು. ಇಂದ್ ನಿಂಗೆ ನಾ ನಿಜ ಹೇಳ್ತ ಒಳೆ. ನಮ್ಮದ್ ರಕ್ತ ಸಂಬಂದ ಅಲ್ಲ. ಇಷ್ಟರವರೆಗೆ ನಮ್ಮ ಇಬ್ಬರ ನೆಡುಲಿ ಮಾನಸಿಕವಾಗಿ ಅಣ್ಣ– ತಂಗೆ, ಸಂಬಂದ ಹುಟ್ಟಿತ್. ನಂಗೆ ನಾನೇ ಸುಳ್ಳ್ ಹೇಳಿಕಂಡ್ ಎಷ್ಟ್ ದಿನಂತ ನಿನ್ನ ಒಟ್ಟಿಗೆ ಇರಿಕಾದೆ? ಹೇಳ್. ಇಂದ್ ನೀ ನಿನ್ನ ಅಪ್ಪ, ಅಮ್ಮ ಅಣ್ಣನ ಕಳ್ಕಾಂಡಳ.

ಅಂದ್ ನಿನ್ನ ಅಪ್ಪ ಅಣ್ಣನ ನೆಡುಲಿ ಜಗಳ ಆಗಿ ಅಣ್ಣ ಮನೆ ಬುಟ್ಟ್ ನಮ್ಮಲಿ ಕೆಲ್ಸಕೆ ಬಂದ್ ಸೇರ್ತ್. ನನ್ನ ಅಪ್ಪ, ಅಮ್ಮಂಗೆ ನಾ ಒಬ್ಬನೇ ಮಂಜ. ನಿನ್ನ ಅಣ್ಣ ನಮ್ಮ ಮನೆ ಸೇರ್‌ಕನ ನಂಗೆ ಏಳ್ ವರ್ಷ. ನಮ್ಮ ಮನೇಲಿ ನಿನ್ನ ಅಣ್ಣನ ಕೆಲ್ಸದವರ ಹಂಗೆ ನೋಡ್ತುಲೆ. ನಾವಿಬ್ಬರ್ ಮನೆಲಿ ಇರ್‌ಕನ ಅಣ್ಣ–ತಮ್ಮನ ಸ್ಥಾನಲಿ ಇದ್ದೊ. ಹೊರಗೆ ಹೋಕನ ಜೋಸ್ತಿಗಳ ಸ್ಥಾನಲಿ ಇದ್ದೊ.

ನಿನ್ನ ಅಣ್ಣನ ಜೀವನಲಿ ಇದ್ದ ಕಥೆಗಳ ಹೇಳ್‌ಕನ ನಂಗೆ ಒಬ್ಬಳ್ ತಂಗಿ ಉಟ್ಟು. ನಾ ಇಲ್ಲಿಗೆ ಬಾಕನ ಅವಳಿಗೆ ಎರಡ್ ವರ್ಷ. ಅವಳ ಹೆಸ್ರ್ ವರ್ಷ–ನೆ. ನಾವು ಇಬ್ಬೋರ್ ಅಣ್ಣ, ತಮ್ಮ, ಆಗಿರುವ ಆದರೆ ನಮ್ಮದ್ ರಕ್ತ ಸಂಬಂಧ ಅಲ್ಲ. ನನ್ನ ತಂಗೆಗೆ ನೀನೇ ಆದಾರ ಆಗಿ ಇರೋಕು–ಂತ ಹೇಳೀತ್.

ಒಂದ್ ದಿನ ನಾವೆಲ್ಲ ಬೆಂಗಳೂರು ಕಡೆ ಹೊರ್‍ಟಿದ್ದ ಕಾರ್ ಓಡ್ಸಿಕಂಡ್ ಇದ್ದ ನಿನ್ನ ಅಣ್ಣನ ಕೈ ತಪ್ಪಿ ಹೋಗಿ ಗುಂಡಿನ ಕಡೆ ಮೋರೆ ಮಾಡಿತ್ತ್. ಅಪ್ಪ ಅಲ್ಲೇ ಸತ್ತ್ ಹೋದರೆ ನಮ್ಮ ಆಸ್ತಿನ ಆಸೆಗಾಗಿ ನಮ್ಮಮ್ಮನ ತಮ್ಮ ಬಂದ್ ಅಮ್ಮನ ಬೇರೆ ಆಸ್ಪತ್ರೆಗೆ ಸೇರ್‍ಸಿ ನನ್ನ ಬೇರೆ ಆಸ್ಪತ್ರೆಗೆ ಸೇರ್‍ಸಿದ. ನಿನ್ನ ಅಣ್ಣನ ಬಿದ್ದಲಿಂದ ಮುಟ್ಟದೆ ಅಲ್ಲೇ ಬುಟ್ಟ್ ಹೋಗಿದ. ಅಮ್ಮನ ಕಥೆ ಏನಾವುಟು–ಂತ ನಂಗೆ ಗೊತ್ತಾತ್ಲೆ. ಆಸ್ಪತ್ರೆಂದ ನನ್ನ ಬುಡ್ಸಿಕಂಡ್ ಹೋಕೆ ನನ್ನ ಮಾವ ಬಾತ್ಲೆ. ಆಸ್ಪತ್ರೆಗೆ ಕೊಡಿಕೆ ನನ್ನ ಹಕ್ಕಲೆ ನಯ ಪೈಸೆ ಇತ್ಲೆ. ಮಹಾರಾಷ್ಟ್ರದ ಒಬ್ಬ ಮೊನ್ಸ್ ಗಂಡ್ ಕೂಸನ ಆಸೆಗಾಗಿ ಆಸ್ಪತ್ರೆಗೆ ದುಡ್ಡು ಕೊಟ್ಟು ಅವರ ಮನೆಗೆ ನನ್ನ ಕರ್ಕ್ಂಡ್ ಹೋಗಿದ್ದ. ಅವ್ಕೆ ಒಬ್ಬಳೆ ಮಗಳಾಗಿತ್ತ್. ನಂಗೆ ಯಾವ ಕೊರ್ತೆ ಕಷ್ಟಗಳ ಕೊಡದೆ ಮಂಜನ ತರಲಿ ಸಾಕಿದ. ಈಗ ಆ ಮನೆ ಯಜಮಾನ್ತಿ ತೀರಿ ಹೋದ. ಮನೆ ಯಜಮಾನ–

ಂಗೆ ಸುಮಾರ್ ನಲವತ್ತ್ ನಲವತ್ತೆರಡ್ ಪ್ರಾಯ. ಮತ್ತೆ ಮೊದುವೆನ ಆಸೆ ಹೊತ್ತ ಯಜಮಾನ ತನ್ನ ಮಗಳಿಗೆ ತಾಳಿ ಕಟ್ಟಿ ಮಗಳನ್ನೇ ಹೆಣ್ಣಾಗಿ ಇಸಿಕಂಬ ಅಂದಾಜಿ ಅವರದ್ದ್ ಆತ್.

ಒಂದ್ ದಿನ ಕತ್ತಲೆಗೆ ಗಂಡ ಹೆಣ್ಣ್‌ನ ಹಂಗೆ ಪಿಸಿ ಪಿಸಿ ಮಾತ್‌ಗ ನನ್ನ ಕೆಬಿಗೆ ಕೇಳ್ತ್. ಆ ಮಾತ್ ನನ್ನ ವಿಷಯಲಿ ನಡೆತ್ತಿದ್ದದ್ದ್–ಂತ ನಂಗೆ ಗೊತ್ತಿದ್ದರೂ ಅಂಡ್ಗಿ ನಿತ್ತ್ ಕೇಳುವ ಅಭ್ಯಾಸ ನಂಗಿತ್ತೆ. ಕೆಳಿರು ಏನ್? ಹೇಳುವಂತದೆಲ್ಲ ಅವ್ಕೆ ಹೇಳಿ ಅಗಿತ್ತ್.

ಮನೆ ಬುಟ್ಟ್ ಹೋಗು–ಂತ ನನ್ನ ಒಟ್ಟಿಗೆ ಸರಿಯಗಿ ಹೇಳದಿದ್ದರೂ ಅವರ ಮಾತ್‌ನ ಅರ್ಥ ಅದ್ಕೆಂದ ಕಡ್ಮೆ ಇತ್ಲೆ. ಈ ಕಥೆಗಳ ಕೇಳಿ ನೋಡಿ ನಂಗೆ ಏನೂ ಹೇಳಿಕಾತ್ಲೆ. ಅವ್ಕೆ ಸರಿಯಾದ ಬುದ್ಧಿ ಹೇಳಿಕೆ ಆಗದೆ. ನನ್ನ ಮನ್ಸ್‌ನ ಬಿಚ್ಚಿ ನೋಡ್ದೆ. ಯಾವ ರೀತಿಲಿ ಇಲ್ಲಿನಾ ಇರ್ದು? ಯಾವ ಆಸೆಗಾಗಿ ನನ್ನ ಕರ್ಕ್ಂಡ್ ಬಂದೊ?

ಸಾವಿರ ಸಾವಿರ ರೀತಿಲಿ ಸಂಕಟ ಬಂದ್ ನನ್ನ ಮನ್ಸ್ ಒದ್ದಾಡಿಕೆ ಸುರು ಮಾಡ್ತ್. ಮಗಳ ಮೋರೆನ ಅವಳ ಅಪ್ಪ ನೋಡ್‌ಕನ ಬಾನ, ಬೆಟ್ಟ, ಬಯಲ್‌ಗ ಚಿನ್ನದ ಬಣ್ಣಂದ ಕೂಡಿ ಮಗಳ ಹೆಣ್ಣಾಗಿ ಸ್ವೀಕರಿಸ್‌ಂತ ಧನ್ಯವಾದ ಹೇಳ್ದ್ ಹಂಗೆ ಅವರ ಮನ್ಸ್‌ಗೆ ಕಂಡತೋ ಏನೋ! ಇದೆಲ್ಲ ಇಂದ್‌ನ ಪ್ರಪಂಚಕೆ ಸರಿ–ಂತ ಕಂಡರೆ, ನನ್ನ ಮನ್ಸ್ ಸರಿ–ಂತ ಒಪ್ಪಿತ್ಲೆ. ಸಮಾಜಲಿ ಸರಿ ಇಲ್ಲದೆ ಸರಿ–ಂತ ಒಪ್ಪಿಕಂಡರೆ ಒಪ್ಪಿಕಂಡವನೇ ಸಂಕಟಲಿ ಬಿದ್ದವೆ–ಂತ ನನ್ನ ಒಳಗೆನ ಮನ್ಸ್ ಹೇಳ್ತ್.

ಅಪ್ಪ ಇರ್‌ಕನ ಇದ್ದ ನನ್ನ ಬಾಳ್ ಆಸ್ತಿನ ಆಸೆಗಾಗಿ ಮಾವ ಮಾಡ್ದ ಅನ್ಯಾಯನ ಎಲ್ಲ ಮರ್‌ತ್ ಹೊಸ ಬಾಳ್‌ನ ಕಾನುವ ಆಸೆಲಿ ಕಿಡ್ಕೆಲಿ ನೋಡ್‌ಕನ ಜೋರ್ ನೆಲ ಹಿಂದೆ ಓಡ್‌ತ್ತಿತ್ತ್. ತಿರ್ಗಿ ನೋಡ್‌ಕನ ನೆಲ ಇದ್ದಲ್ಲಿ ಇದ್ದ್ ಅದರ ಜಾಗೆನ ಬುಟ್ಟ್ ಹೋಗಿತ್ಲೆ.

ಕಾಲ ಹಿಂದೆ ಹೋದೆ–ಂತ ನನ್ನ ಭ್ರಮೆ. ಹಿಂಗಾದರೆ? ಹುಚ್ಚಿ ಅಲೋಚನೆ–ಂತ ತಿಳ್ದ್ ಎದುರು ನೋಡ್ದೆ ಹಂಗೆ ನೋಡ್‌ಕನ ಶ್ಯಾಂ ರಾಯರ ಮನೆ ಮುಟ್ಟಿತ್. ಆತ್ಮ ವಿಶ್ವಸಲಿ ಇದ್ದ ರೈಲ್ ನಿನ್ನ ಮನೆ ಸೆರುವ ಹಂಗೆ ಆತ್. ನಿನ್ನ ಅಣ್ಣನ ನೋಡುವ ಆಸೆಂದ ಬಂದೆ. ನಿನ್ನ ಅಣ್ಣನ ಹೆಣನ ಒಂದ್ ವಾರದ ಹಿಂದೆ ಹೊತ್ತ್‌ಕಂಡ್ ಹೋದ ಗುಜಿರಿ ಜೀಪು ಶಾಂ ರಾಯರ ಕಣ್ಣಿಗೆ ಕಂಡದರ ಅವರ್‌ಂದ್ ತಿಳ್ಕಂಡ ಮೇಲೆ ಅಂದ್ ನಿನ್ನ ಅಣ್ಣ ಹೇಳ್ದ ಮಾತ್‌ನ ಈಡೇರ್ಸುವ ಆಸೆಗಾಗಿ ನಾ ನಿನ್ನ ಮನೆಗೆ ಬಂದೆ. ಇಷ್ಟ್ ದಿನ ನನ್ನ ಎರಡ್ ಕಣ್ಣ್‌ಗೆ ನಿಂಗೆ ಗೊತ್ತ್ ಆಗದಂಗೆ ನಿನ್ನ ಪೊರ್ಲುನ ನೋಡ್ತಿತ್ತ್.

" ನಿನ್ನ ತಪ್ಪು ದಾರಿ ನಡ್ಸೋಕು–ಂತ ನನ್ನ ಆಸೆ ಅಲ್ಲ. ಎಲ್ಲ ರೀತಿಲಿ ನಿನ್ನ ನಾ ತಿಳ್ದ್ ನೋಡ್ದೆ. ಹೆಣ್ಣ್ ಜಿವಕ್ಕೆ ಮೋಸ ಮಾಡಿಕಿಲೆ–ಂತ ನನ್ನ ನಿರ್ಧಾರ" ಈಗ ನಂಗೆ ನೀ ಬೇಕು ನಿಂಗೆ ಮನ್ಸ್ ಇಲ್ಲದರೆ ನನ್ನದೇನ್ ಒತ್ತಾಯ ಇಲ್ಲೆತ ಹೇಳ್ತ್.

ಅಣ್ಣಾ ನೀ ನನ್ನಂದ ದೂರ ಆದರು ನಮ್ಮ ರಕ್ತ ಸಂಬಂಧಂದ ದೂರ ಆಗದೆ ಒಂದೇ

ಸಂಬಂಧಂತ ತೇಳುವ ಸತ್ಯನ ತೋರ್ಸಿಕೊಟ್ಟ್ ನನ್ನ ಬಾಳಿಗೆ ಹೊಸ ಬೊದ್ಕುನ ಕಟ್ಟಿಕಂಬ ಗುರ್ತುನ ನೀನೆ ಗೊತ್ತ್ ಮಾಡ್ದ ಅಣ್ಣಾ. ಕಳ್ಕಂಡ ಅಣ್ಣನ ನೆನ್ಸಿಕಂಡ ವರ್ಷನ ಎರಡ್ ಕಣ್ಣ್‌ಂದ ಜಾರ್ದ ಹನಿಗ ಮೊಣ್ಣ್‌ಗೆ ಬಿದ್ದ್ ಆರಿ ಹೋಗಿತ್ತ್. ಹಂಞ ಹೊತ್ತ್‌ಲಿ ಇಂತ ಪುಣ್ಯವಂತನ ನನ್ನ ಕಣ್ಣಾರೆ ನೋಡ್ದ ಈ ಮೊಣ್ಣ್‌ಲಿ ನಾನೆ ಧನ್ಯ.

ಇವಂಗಾಗಿ ನನ್ನಂದ ಪೊರ್ಲು ಪೊರ್ಲುನ ಗೂಡೆಗ ಎಷ್ಟೊ ಜನ ಸಾಲ್ ಸಾಲಾಗಿ ನಿಲುವ ಬಯಸದೆ ಬಂದ ಭಾಗ್ಯನ ನೆನ್ಸಿದ ವರ್ಷನ ಮನ್ಸ್ ಪ್ರೀತಿನ ಸೆಳೆಲಿ ಸೇರಿ ಕುಣಿಯಕೆ ಸುರು ಆತ್. ಅನಿಲ್ ಅವಳ ಎದೆಗೆ ಹತ್ತ ತೊಬ್ಬಿ ಹಿಡ್ತ್. ವರ್ಷ ಅವನ ಕೈನ ಗಟ್ಟಿ ಹಿಡ್ದ್ ಸಂಕಟ ಬಂದವಳ ಹಂಗೆ ಅವನ ಬುಜಕ್ಕೆ ಒರ್ಗಿತ್ ವರ್ಷ.

* * * * * *

# ತಬ್ಬಲಿ

ಹಿಂಬೊತ್ತ್‌ನ ಕೆಂಪು ಬಿಸಿಲ್ ಹೊತ್ತ್ ಹೋದಂಗೆ ಬಾಡಿಕಂಡ್ ಬರ್ತಿತ್ತ್. ಹಳ್ಳಿನ ಮೂಲೆ ಸಣ್ಣ ಮನೆಲಿ ಶೀಲಾ ಏನೋ ಯೋಚನೆಲಿ ತಲೆಗೆ ಕೈ ಹೊತ್ತ್ ಕುದ್ದಿತ್ತ್. ಆ ಹೊತ್ತ್‌ಲಿ ಅವಳ ಯಾರು ಕೂಡ ನೋಡಿರೆ ಪಾಪಂತ ಹೇಳುವ ಅವಸ್ಥೆಲಿತ್ತ್.

ಯಾದೋ ಒಂಥರಾ ಬೇಜಾರ್. ದಿನಂದ ದಿನಕೆ ಅವಳ ಕೆಟ್ಟಮನ್ಸ್ ಆಕಂಡ್ ಬರ್ತಿತ್ತ್. ಆ ಮೋರೆನ ಹೆಂಗೆ ಅರ್ಥ ಮಾಡೋಕುಂತ ಗೊತ್ತಾದ್ಲೆ. ಬಾಡಿ ಹೋದ ಆ ಮೋರೆಲಿ ಹೆಳಿಕ್ಕಾಗದ ಬೇಜಾರ್ ಕಣ್ಣೀರ್ ಒರ್‌ಸಿಕಣುವ ಪರಿಸ್ಥಿತಿ.

ಯಾಕೆ? ಏನ್‌ಂತ ಕೇಳವು ಇತ್ಲೆ. ಕೇಳೀರು ಪಾಪ ಎಂತ ಹೇಳಿಕೆ ಆದೆ! ಯಾವ ದೊಡ್ಡಸ ಸುಖ ಅವಳಿಗಿತ್ಲೆ. ಬೇರೆವರ ಜೀವನಲಿ ಸುಖ ಉಟ್ಟು. ನನ್ನ ಜೀವನಕೆ ಅಂತ ಸುಖ ಬೇಕಾಯ್ತ್. ಆಸೆ ಒಂದ್ ಕಡೆಂಡದೆ. ಇನ್ನೊಂದ್ ಕಡೆಂದ ಮನ್ಸ್‌ಗೆ ಸಮಧಾನ ತರುವಂತ ವಿದ್ಯೆ ಇತ್ಲೆ. ಹದಿನೆಂಟ್ ವರ್ಷಕ್ಕೆ ಹೆತ್ತವು ಇಲ್ಲದ ಇವಳ ಸಂಬಂದದವು ದಿಕ್ಕ್ ದೆಸೆಯಿಲ್ಲದೆ ಎಲ್ಲಿಂದಲೋ ಬಂದ್ ಕೆಲ್ಸಕೆ ಸೇರಿಕಂಡವನೊಟ್ಟಿಗೆ ಮೊದ್ವೆ ಮಾಡ್ಸಿದ. ಮಕ್ಕ ಆತ್ಲೆಂತ ನೆವನ ಹುಡ್ಕಿ ಬೇರೆವರ ಎದ್‌ರ್ ಹೊಡ್ದ್ ಬಂಗ ಬರ್‌ಸ್ತಿತ್ ಅವಳ ಗಂಡ.

'ಹಂಙಾ ಸಮಯ ಕಳ್ದ ಮೇಲೆ ಹೆಣ್ಣ್ ಕೂಸುಗೆ ಜನ್ಮ ಕೊಟ್ಟತ್. ಅಂದರು ಗಂಡನ ಹಿಂಸೆ ಕಡ್ಮೆ ಆತ್ಲೆ. ಕೂಸ್ ಬೆಳ್ದ್ ದೊಡ್ಡದಾದಂಗೆ ಒಂದ್ ದಿನ ಅಪ್ಪ ಕಣ್ಮ್‌ಚ್ಚಿತ್. ಶೀಲನ ಎದೆ ಒಳೆಗೆ ಇರುವ ಸತ್ಯ ಅವಳ ದಿನ ದಿನ ಸುಡುವಂಗೆ ಮಾಡ್ತಾಟ್ಟು.

"ಅಂದ್‌ಂದ ಇಂದ್‌ನವರೆಗೆ ಮುಚ್ಚಿ ಇಸಿದ ಸತ್ಯನ ನನ್ನ ಮಗಳಿಗೆ ಹೇಳಿಯೇ

ಹೇಳೊಕು. ನಾ ಹೇಳದೆ ಬೇರವರ ಬಾಯಿಂದ ಗೊತ್ತಾದರೆ ನನ್ನ ಮೇಲೆ ಯಾವ ಸಂಶಯ ಬಾದು. ಅಥವಾ ಹೆಂಗೆ ತಡ್ಕೊಂಬದು. ಹೇಳಿಕೆ ಆಗದ ಗುಟ್ಟುನ ಯಾವ ತರಲಿ ಅವಳಿಗೆ ತಿಳ್ಸುದು.!

ಎಂಥ ಬೆಕರು ಆಗಲಿ. ಬೂದಿ ಮುಚ್ಚಿದ ಕೆಂಡದಂಗೆ ಇರುವ ಸತ್ಯನ ಜ್ವಾಲಾ ಮುಖಿನಾಂಗೆ ಒಡ್ದೇ ಒಡಿಯೋಕು. ಸತ್ಯನ ಮುಚ್ಚಿ ಇಸಿರುವ ನನ್ನ ಹಾಂಗೆ ಎಷ್ಟೋ ಜನ ಅಮ್ಮಂದರ್ ಈ ಮೊಣ್ಣ್ ಮೇಲೆ ಒಳ. ನಾನು ಈ ತರ ಮಾಡ್ರೆ ನನ್ನ ಆತ್ಮಕ್ಕೆ ಶಾಂತಿ ಸಿಕ್ಕಿಕಿಲೆ. ನನ್ನ ಮಗಳಿಗೆ ವಂಚನೆ ಮಾಡಿಕಂಡ್ ಸಾಯಕಾಗದ್. ಏನ್ ಬೇಕಾದ್ರ್ ಆಗಲಿ ಇಂದಲ್ಲ ನಾಳೆ ಆದ್ರ್ ನನ್ನ ಮಗಳಿಗೆ ಇಷ್ಟ್ ವರ್ಷದ ಗುಟ್ಟ್‌ನ ತಿಳ್ಸಿ ತಿಳ್ಸ್‌ಕು," ಶೀಲಾನ ಎದೆ ಒಳೆಗೆ ಚೂರಿ ಕತ್ತಿ ಬೀಸಿತ್. ಸೀದಾ ಮಗಳೊಟ್ಟಿಗೆ ಹೇಲಿಕಾಗದೆ ಯೋಚನೆ ಮಾಡಿ ಮಾಡಿ ಕಣ್ಣ್ ಬಾಪಿ ಹೋಗಿತ್.

ಹೊತ್ತ್ ಹೋದ್ ಗೊತ್ತಾತ್ಲೆ. ಎಲ್ಲದರ ಮರ್ತ್ ಶೀಲ ಹಿಂಬೊತ್ತ್ ಮೂರ್ ಮೂರ್ ಸಂಜೆಲಿ ಮೆಟ್ಲ್‌ಕಲ್ಲ್‌ಲಿ ಕುದ್ದ್‌ಕಂಡ್ ಮರ್ಡಿಕೆ ಸುರ್ ಮಾಡಿತ್ತ್. ಕತ್ತಲಾಕನ ಮನೆಲಿ ದೀಪ ಹೊತ್ಸುಕುಂತ ತಿಳ್ದ್ ಬೇಗ ಬೇಗ ಎದ್ದ್ ಒಳೆಗೆ ಹೋಗಿ ದೀಪ ಹೊತ್ತಿಸಿ ನಿತ್ತಲ್ಲಿ ನಿತ್ತೇ ಹೋಗಿತ್ತ್. ಹಿಂಗೆ ಜೀವನ ನಡ್ಸುವರ ಯಾರ ಮೋರೆಲಿ ಕುಸಿ ಇರ್ದು? ಕನ್ಸ್ ಕಂಡ್ಕಂಡ್ ನಿತ್ತ ಅವಳ ಮನ್ಸ್‌ಗೆ ಹೇಳಿಕಾಗದ ಬೇನೆ ಆಗಿತ್ತ್. ಎಷ್ಟ್ ಹೊತ್ತ್ ಯೋಚ್ನೆ ಮಾಡಿರು ಮುಗಿಯದ ಕಥೆ ಆಗಿತ್ತ್.

ಎದ್ದ್ ಬಂದ್ ಕಿಡ್ಕೆ ಹಕ್ಕಲೆ ನಿತ್ತಿತ್ ಶೀಲ. ಬೆಳ್ಜ್‌ರ್‌ನ ಬಣ್ಣ, ಹಕ್ಕಿಗಳ ಮರ್ಡ್‌ಟ, ಸದ್ದ್ ಇಲ್ಲದೆ ಉಯ್ಯಾಲೆ ಆಡುವ ದೈ ಬೊಳಿ, ಮರಗ, ಆಕರ ಇಲ್ಲದಾಂಗೆ ಕಾಣ್‌ತ್ತಿತ್ ಶೀಲನ ಮನ್ಸ್‌ಗೆ. ಅದರ ನೋಡ್ದ ಶೀಲನ ಮನ್ಸ್ ಎಲ್ಲೆಲ್ಲೊ ಓಡ್ತಿತ್ತ್. ಕಳ್ದ ದಿನಗಳ್‌ಂದ ಆಗಾಗ ನಿಲ್ಕಿ ಹೋಗ್ತಿದ್ದ ಯಾದೋ ಒಂದ್ ನಿರ್ಧಾರಕ್ಕೆ ಬಂದಿತ್ತ್. ಒಂದ್ ಹೊತ್ತ್ ಮಾತ್ರ. ಮತ್ತೋಮ್ಮೆ ಹೇಳಿಕಾಗದಷ್ಟ್ ಬೇನೆ ಆಗ್ತಿತ್ತ್. ಒಮ್ಮೊಮ್ಮೆ ಯಾರೂ ಕಾಣದ ಕುಸಿ ಆತ್ತಿತ್ತ್. ತಿರ್ಗಿ ಮಲ್ಲಿದ ಮಗಳ ಹಕ್ಕಲೆ ಕುದ್ದಿತ್ ಶೀಲ ದೀಪ ಹೊತ್ತಿಕಂಡ್ ಇತ್ತ್.

ಮಗಳ್ ಸುಖಲಿ ನಿದ್ದೆ ಮಾಡಿಕಂಡಿತ್ತ್. ಮಗಳ ಪೊರ್ಲುನ ಮೋರೆನ ಕಣ್ಣ್‌ಲಿ ಕಣ್ಣ್ ಇಸಿ ನೋಡಿಕಂಡ್ ಕುದ್ದ ಶೀಲನ ಹೃದಯ ಒಡ್ದ್ ಹಳ್ಳ ಹರ್ದ್‌ಂಗೆ ಹರ್ದ್ ಎರಡ್ ಕಣ್ಣ್‌ಂದ ನೀರ್ ಜಾರಿ ಮಗಳ ಮೋರೆ ಮೇಲೆ ಹರೆತ್ತಿತ್ತ್.

ಮಗಳಿಗೆ ಕಾಗದದ ಮೂಲಕ ತಿಳ್ಸಿಕೆ ನಿರ್ಧಾರ ಮಾಡ್ತ್. "ಮಗಳೇ ಅಮ್ಮನ ಬಗ್ಗೆ ಮಾತೃ ದೇವೋಭವೋ ಈ ವಾಕ್ಯನ ಕೇಳ್ತ್ ಒಳ. ಅಮ್ಮ ದೇವ್ರುಗೆ ಸಮ. ಅವಳ ಹೃದಯ ತುಂಬಾ ಅಡಿಲಿ ಉಟ್ಟು. ಭಾಮಿನ ಹಂಗೆ. ಆ ಬಾಮಿನ ನಿಲ್ಕಿ ನೋಡಿರೆ ವಾತ್ಸಲ್ಯ ಅನ್ನುವ ನೀರ್ ತುಂಬಿದ್ದದೆ. ಅವಳ ಬೆನೆನ ನುಂಗಿ ಕಂಡ್ ಮಕ್ಕಳಿಗೆ ಕುಸಿ ಕೊಡುವಂತ ಅಮೃತ ಬಟ್ಲ್.

## ಹೊಸ ಬೊದ್ಕು

ಮಕ್ಕ ಆಕೆ ಮುಂದೆ ದುಡ್ಡ್‌ನ ಅಸೆಗಾಗಿ ಅಪರೇಷನ್ ಮಾಡ್ಸಿಕಂಡುಟುಂತ ನಿನ್ನಪ್ಪ ಹೇಳ್ದ. ನಂಗೆ ಆಕಾಶನೆ ತಲೆ ಮೇಲೆ  ಬಿದ್ದಂಗೆ ಅತ್. ಆ ಗಳಿಗೆಲಿ ನಾ ಸಾಯುವ ಅಂದಾಜು ಮಾಡ್ದೆ ಕೋಣೆಲಿ ಸೀರೆ ಕಟ್ಟಿ ಗಂಟ್ಲ್‌ಗೆ ನೇಣ್ ಹಾಕಿಕಂಬಕೆ ಮನ್ಸ್ ಮಾಡ್ದೆ. ಅದೇ ಹೊತ್ತ್‌ಲಿ ಕೆಳಗೆ ಮನೆಂದ ಯಾದೋ ಕೆಲ್ಸ ಹೇಳಿಕೆ ಬಂದ ದನಿಗಳ ಮಂಜ, ಒಳೆಗೆಂದ ಕೇಳ್ದ ಸದ್ದ್‌ಗೆ ಕಿಡ್ಕೆಲಿ ನಿಲ್ಕಿ ನೋಡಿ ನನ್ನ ಸಾಯುವ ಸ್ಥಿತಿಂದ ತಪ್ಪಿಸಿದ.

ನಾ ಒಳಗೆ ಬಾದು ಬೇಡಾಂತ ಹೇಳಿರು ಅದರ ಲೆಕ್ಕಕೆ ತೆಗೆಯದೆ ಬಾಗ್‌ಲ್ ಒಡ್ದ್ ಸೀರೆನ ತುಂಡ್ ಮಾಡ್ದ. ನಾನೆ ಸಾಯಕೆ ಮನ್ಸ್ ಮಾಡಿರು ಆ ಹೊತ್ಲಿ ನನ್ನ ಕಾಪಾಡ್ದ ಅವು ನಂಗೆ ದೇವ್ರು ಹಂಗೆ ಕಂಡ. ನನ್ನ ಎಲ್ಲಾ ಸಂಕಟನ ಅವ್ಕೆ ಹೇಳ್ದೆ. ತಾಯ್ತತನದ ಗುರ್ತಾಗಿ ನಂಗೊಂದ್ ಕೂಸು ಬೇಕು. ಅದರೆ ಅದ್ ನನ್ನ ಗಂಡಂದ ಸಾದ್ಯ ಇಲ್ಲದ ಮಾತಾಗಿತ್ತ್. ಅಂದರು ನಾ ಬಂಜೆ ಅಲ್ಲಂತ ಗುರ್ತಿಸಿ ಕಣಕ್ಕೂತ ಆಸೆ ಇತ್ತ್. ಅದ್ ಸಾಧ್ಯ ಇಲ್ಲೆಂತ ಗೊತ್ತಾಗಿ ಈ ನಿರ್ಧಾರಂತ ಹೇಳ್ದೆ.

ದನಿಗಳ ಮಂಜ ಏನ್ ತಿಳ್ಕಂಡಂತ ಗೊತ್ತಾತ್ಲೆ. ನಿ ಇಂದಲ್ಲ ನಾಳೆದ್ರ್ ಸತ್ತೆ ಸತ್ಯಂತ ಒಮ್ಮೆ ನನ್ನ ತೊಬ್ಬಿ ಹಿಡ್ದ್‌ದ್ದ್ ಮಾತ್ರ ನಂಗೆ ಗೊತ್ತ್. ಆ ಪ್ರತಿ ಫಲನೆ ನೀ ಮಗಳೆ

ನಿನ್ನ ಎಲ್ಲ ಆಟ, ಪಾಠ, ತೊದಲ್‌ಗಳ ನೋಡಿ ಆ ಕಹಿ ಘಟನೆಗಳ ಮರ್ತ್ ಕುದ್ದಿದೆ. ಗಂಡ ಆದವನ ಕಾಟ ಜಾಸ್ತಿ ಆಗಿತ್ತ್. ನಿಂಗೆ ಬೇಕಾಗಿ ಎಲ್ಲ ಕಷ್ಟಗಳ ತಡ್ಕ್ಂಡೆ ಗಂಡ ಅಚಾನಕ್ಕಾಗಿ ಸತ್ತ್ ಹೋದ ಮೇಲೆ ನಾ ಮಾಡ್ದ ತಪ್ಪುಗಳ ನೆನ್ಸಿಕನ ನನ್ನ ಹೊಟ್ಟೆಗೆ ಚೂರಿ ಹಾಕಿದಂಗೆ ಆಗ್ತಾ ಉಟ್ಟು. ಮಗಳೇ ಒಂದ್ ಹೆಣ್ಣ್ ನ ಮನ್ಸ್. ಬೊದ್ಕು ಸಾರ್ಥಕ ಆದು. ಅಮ್ಮ ಆಕನ. ನಮ್ಮ ಹಿರಿಯರ ಮಾತ್ ನನ್ನ ಕೆಬಿಗೆ ಕೇಳ್ತಿತ್ತ್. ಅದ್ಕಾಗಿ ನಾ ದಾರಿ ತಪ್ಪಿದೆ ಹೋರ್ತ್ ದುಡ್ಡಿಗಾಗಿ, ಕುಸಿಗಾಗಿ ಅಲ್ಲ ಈ ಮಾತ್‌ನ ನಿ ಒಪ್ಪಿಕಣ್ಕ್ಕೂ ಮಗಳೇ.

ಅಂದ್ ನೀ ನನ್ನ ಅಪ್ಪ ಯಾರ್, ಎಲ್ಲಿಂತ ಕೇಳ್ದ ಈಗ ಇದರೆಲ್ಲ ಕಾಗದಲಿ ತಿಳ್ಸಿನೆ. ನಾ ಮಾಡ್ದ ತಪ್ಪುನ ಉತ್ತರ ನಿಂಗೆ ತಿಳ್ಸ್‌ತ ಒಳೆ. ನಿನ್ನ ತಬ್ಬುಲಿ ಮಾಡಿ ಬುಟ್ಟ್ ಹೋಗ್ತ ಒಳೆ. ನನ್ನ ನೀ ಕ್ಷಮಿಸೊಕು" ಕಾಗದ ಮುಗ್ಸಿತ್ ಶೀಲ.

ಅಂದ್ ಮಗಳಿಗೆ ಕಡೆ ದಿನದ ಪರೀಕ್ಷೆ ಆಗಿತ್ತ್. ಯಾಗೋಳ್ ಕುಸಿಲಿ ಪರೀಕ್ಷೆ ಬರೆತ್ತಿತ್ತ್. ಅಂದ್ ಬೇಗ ಬೇಗ ಪರೀಕ್ಷೆ ಬರ್ದ್ ಮುಗ್ಸಿ ಮನೆ ದಾರಿ ಹಿಡ್ತ್. ಮನ್ಸ್‌ಲಿ ಏನೋ ಸಂಕಟ ತುಂಬಿ ಹೃದಯ ಭಾರ ಅಗಿತ್ತ್.

"ಯಾರೋ ಹೇಳ್ದ ಮಾತ್‌ನ ಕೇಳಿ ನನ್ನ ಅಪ್ಪ ಯಾರ್‌ಂತ ಅಮ್ಮನ ಒಟ್ಟಿಗೆ ಕೇಳ್ಬು ಬೇಡಾಗಿತ್ತ್" ಮನ್ಸ್‌ಲಿ ನೆನ್ಸಿ ಮನೆ ಕಡೆ ಹೋಕನ ಬಾಕನ ಬಾಗ್‌ಲ್ ಸೆರೆಲಿ ಅಮ್ಮನ ಕೈ ಬರಹದ ಕಾಗದ ಸೆಕ್ಕಿಸದರ ನೋಡಿ ಅವಳ ಹೃದಯ ಅಮ್ಮಾ..ಂತ ಕರಿಯಕೆ ಸುರು ಮಾಡ್ತ್. ಕಾಗದ ಓದಿಕಂಡ್ ಇದ್ದಾಂಗೆ ತಲೆ ತಿರ್ಗಿ ಬೀತ್. ಹನಿ ಹೊತ್ತ್ ಕಳ್ದ್ ಬಾಗ್‌ಲ್ ತೆಗ್ದ್ ನೋಡ್ರೆ ಮನೆ ಅಂತ ಹೇಳುವ ಜಗತ್ತೇ ಬರೇ ಸೊನ್ನೆ ಆಗಿತ್ತ್.

# ಮತ್ತೆ ಹಿಡ್ದ ಗುರ್ತ

ಮಕ್ಕಳಿಗೆಲ್ಲ ಅಂದ್ ಶಾಲೆಗೆ ರಜೆ. ಬೊಳ್ಪುಂದ ಕತ್ತಲೆವರೆಗೆ ಹಳ್ಳದ ಕರೆಲಿ ಪೊಯ್ಯಲಿ ಕುಂಡೆ ಊರಿ ದೋಣಿ, ಮನೆ ಕಟ್ಟಿಕಂಡ್ ಕುದ್ದ ಮಕ್ಕಳಿಗೆ ಕತ್ತಲಾದ್ ಗೊತ್ತಾತ್ಲೆ. ಶ್ರೀ ಲಕ್ಷ್ಮೀ ಆತ್ಮೀಕ್‌ನ ದನಿಗಳ ಮಗಳಾಗಿತ್ತ್.

ಅವು ಕಟ್ಟ್‌ತ್ತಿದ್ದ ಮನೆಗಳ ಪೂರ್ತಿ ಮಾಡಿಕೆ ಆಗಿತ್ಲೆ. ಮನೆನ ಆಕಾರಕ್ಕೆ ಬರುವ ಹೊತ್ತ್‌ಲಿ ನೀರ್‌ಲಿ ತೊಳ್ದ್ ಹೋಗ್‌ತ್ತಿತ್ತ್. ಸೂರ್ಯ ಮುಳ್ಗುವ ಹೊತ್ತು ಆದರ ಅಜ್ಜಿ ಪಿಳ್ಳೆನ ಕಾಂಬೊದ್ಲೆಂತ ಹಳ್ಳದ ಕರೆಗೆ ಹುಡ್ಕಿಕಂಡ್ ಬಂದ್ ಅವಳ ಎಳ್ಕಂಡ್ ಹೋದ ಅಜ್ಜಿ.

ಆತ್ಮೀಕ್‌ನ ಅಮ್ಮ ದನಿಗಳ ತೋಟದ ಕೆಲ್ಸ ಮುಗ್ಸಿ ಬಾಕನ ಶ್ರೀ ಲಕ್ಷ್ಮಿನ ಅಜ್ಜಿನ ಮೋರೆ ಅಷ್ಟ್ ದಪ್ಪ ಅಗಿತ್ತ್. ಆತ್ಮೀಕ್ ಅವರ ಕೆಲ್ಸದವಳ ಮಂಜ. ನಮ್ಮ ಜಾತಿಂದ ಕೀಳ್ ಜಾತಿಂತ ಬೇದ ಅಜ್ಜಿನ ಮನ್ಸ್‌ಲಿ.

ಅವನ ಅಮ್ಮಂಗೆ ಬೇಜಾರ್ ಆಗಿ ಅವನ ಬೆನ್ನ್‌ಗೆ ಪಡೆದ ಕೋಲ್‌ಲಿ ಬೆನ್ನ್ ನೆಡುಗೆ ಬಾರ್ಸಿತ್. ಪೆಟ್ಟ್ ಎತ್ತಂದ ಬಿದ್ದದ್‌ಂತ ಅವಂಗೆ ಗೊತ್ತಾತ್ಲೆ. ಆ ಪೆಟ್ಟ್ ಅವಂಗೆ ಯಾವ ಲೆಕ್ಕಕೆ ಬಾತ್ಲೆ. ಶ್ರೀ ಲಕ್ಷ್ಮಿನ ಅಜ್ಜಿ ಅವಳ ಎಳ್ಕಂಡ್ ಹೋದ್ ಅವಂಗೆ ಬಾರಿ ಬೇಜರ್ ಆಗಿತ್ತ್.

ಅಂದ್ ಅವಂಗೆ ಊಟ, ನಿದ್ರೆ ಯವುದು ಬೇಡಾಗಿತ್ತ್. ಮಾರನೇ ದಿನ ಅವಳ ಆಟಕೆ ಕರಿಯಕೆ ಹೋಕನ "ಅವಳ ಆಟಕೆ ಕರ್ಕಂಡ್ ಹೋಕೆ ನೀ ಯಾರ್? ಇನ್ನ್ ಮುಂದೆ ನಿನ್ನ ಅಮ್ಮ ಇಲ್ಲಿಗೆ ಕೆಲ್ಸಕೆ ಬಾದು ಬೇಡ." ಆತ್ಮೀಕ್ ಚಪ್ಪೆ ಮೋರೆ ಹಾಕಂಡ್ ಸೀದಾ

ಹೋಗಿ ಅಮ್ಮನ ಒಟ್ಟಿಗೆ ಹೇಳ್ತ್. "ಇಷ್ಟರವರೆಗೆ ಒಟ್ಟಿಗೆ ಆಟ ಆಡಿಕಂಡ್ ಇದ್ದ ಮಕ್ಕಳ ಮೇಲೆ ಇಷ್ಟೊಂದ್ ಸಿಟ್ ಯಾಕೆ? ಇನ್ ಕೆಲ್ಸಕೆ ಬಾದು ಬೇಡಂತ ಹೇಳ್ದ ಮೇಲೆ ಇನ್ನ್ ಇಲ್ಲಿ ಇರ್ದು ಸರಿ ಅಲ್ಲ. ಯಾವ ಪೊರ್ಲುಗೆ" ಬೇರೆ ಮನೆಲಿ ಕೆಲ್ಸ ಕೇಳ್ದ. ಅದ್ ಹಂಞ ಪೇಟೆ ಕಡೆ ಅಗಿತ್ತ್. ಆತ್ಮೀಕ್ ಬೆಳ್ದ್ ದೊಡ್ಡವ ಆಗಿ ಕಂಪೆನಿಲಿ ಸಣ್ಣ ಕೆಲ್ಸಕೆ ಸೇರಿ ಕಂಡಿತ್. ಅದರ್‌ಂದಾಗಿ ಅವರ ಜೀವನಕೆ ಈಗ ಯಾವ ಕಷ್ಟ ಇಲ್ಲದಾಂಗೆ ಆತ್. ಒಂದ್ ದಿನ ಆತ್ಮೀಕ್ ಕೆಲ್ಸಕೆ ಹೋಗುವ ದಾರಿಲಿ ಒಂದ್ ಹೆಂಗಸ್‌ನ ಮೋರೆ ಕಂಡ್ ಅವಂಗೆ ಅನುಮಾನ! ಈ ಮೊರೆನ ನೋಡ್ದ ನೆನ್ಪಾಗಿ ದೈರ್ಯ ಮಾಡಿ " ನೀವು ಶ್ರೀಲಕ್ಷ್ಮೀನ? ಏನ್ ಇಲ್ಲಿ? ಹೆಂಗೆ ಒಳ?" " ಬೇಜರ್ ಮಾಡ್ದು ಬೇಡ ನಂಗೆ ನಿಮ್ಮ ಗೊತ್ತಾತ್ಲೆ" "ಗೊತ್ತಾತ್ಲೆನಾ! ಅಂದ್ ಹಳ್ಳದ ಕರೆಲಿ ಆಟ ಆಡಿ ಪೆಟ್ಟ್ ತಿಂದದ್? ಅಂದ್ ನಿಮ್ಮ ಮನೆಲಿ ನನ್ನ ಅಮ್ಮ ಕೆಲ್ಸ ಮಾಡ್ದ್? ನೆನ್ಪ್ ಉಟ್ಟಾ ಅವನೇ ನಾ ಅತ್ಮೀಕ್" " ಹೌದಾ! ನೀ ತುಂಬಾ ಬದಲಾಗಳ, ಗುರ್ತನೇ ಸಿಕ್ಕಿತ್ಲೆ ಆತ್ಮೀ ನಿ ಹೆಂಗೆ ಒಳ?" "ನಾ ಲಾಯ್ಕಾಗಿ ಒಳೆ. ನೀ ಹೆಂಗೆ ಒಳ?" "ಪರವಾಗಿಲ್ಲೆ ಆತ್ಮೀ" "ಕೂಸು ನಿಂದಾ?" ಹೌದ್ ಆತ್ಮೀ ಏನ್ ಮಾಡ್ದು ಹೇಳ್ ಕೂಸುಗೆ ಅಷ್ಟೊಂದ್ ಹುಷಾರ್ ಇಲ್ಲೆ ಅದ್ಕೆ ಆಸ್ಪತ್ರೆಗೆ ಹೊರ್ಟೆ"

"ಹೌದಾ? ನಾ ಇಲ್ಲೇ ಪೇಟೆ ಕರೆಲಿ ಕೆಲ್ಸ ಮಾಡ್ತ ಒಳೆ "ತಂಬಾ ವರ್ಷ ಆತ್ ನಿನ್ನ ನೋಡದೆ, ನಿ ನನ್ನ ನೋಡದೆ ಮತ್ತೆ ಮೊದ್ವೆ ಆಗಿ ಎಷ್ಟ್ ವರ್ಷ ಆತ್. ಗಂಡಂಗೆ ಎಂತ ಕೆಲ್ಸ." "ಮೊದ್ವೆ ಆಗಿ ಹತ್ತ್ ವರ್ಷ ಆತ್ ಗಂಡ ಶ್ಯಾಮ. ಕಂಪೆನಿಲಿ ಕೆಲ್ಸ." ಹೇಳುವ ಹೊತ್ತ್‌ಲಿ ಆಸ್ಪತ್ರೆ ಮಾಡ್ ಕಂಡತ್. "ನಾ ಕೂಸುನ ತೋರ್ಸಿ ಬನ್ನೆ" ಅಸ್ಪತ್ರೆ ಒಳಗೆ ನಡ್ತ್ ಶ್ರೀ ಲಕ್ಷ್ಮಿ. ಎಷ್ಟೊ ವರ್ಷಗಳ ಕಥೆನ ಹೇಳೋಕುಂತ ಆಸೆಂದ ಆಸ್ಪತ್ರೆ ಹೊರಗೆ ನಿತ್ತಿತ್ತ್ ಅತ್ಮೀಕ್.

ಶ್ರೀ ಲಕ್ಷ್ಮಿ ಆಸ್ಪತ್ರೆಂದ ಹೊರಗೆ ಬಾಕನ ಅವಳ ಸೀರೆ ಸೆರ್‌ಂಗ್ ಕೊಡಿಂದ ಅವಳ ಕಣ್ಣ್ ಉಜ್ಜಿಕಂಡ್ ಕೂಸುಗೆ ಮುತ್ತ್ ಕೊಟ್ಟ್‌ಕಂಡ್ ಬಾತ್. ಅದರ ಆತ್ಮೀಕ್ ಕಣ್ಣಾರೆ ಕಂಡಿತ್ ಅವಳಿಗೆ ಮಾತ್ರ ಆತ್ಮೀಕ್ ನೋಡ್ದ್ ಗೊತ್ತಾತ್ಲೆ.

"ಲಕ್ಷ್ಮಿ ಯಾಕೆ ಮರ್ಡುತ ಒಳ ಅಂಥದ್ ಏನಾತ್?" ಶ್ರೀ ಲಕ್ಷ್ಮಿನ ಬಾಯಿಂದ ಯಾವ ಉತ್ತರ ಬಾತ್ಲೆ. ಅನುಮನ ತಿಳ್ಕಂಡ ಆತ್ಮೀಕ್ ಸೀದಾ ಡಾಕ್ಟ್‌ರ ಹಕ್ಕಲೆ ಹೋಗಿ ಕೂಸುನ ಬಗ್ಗೆ ವಿಚಾರಣೆ ಮಾಡ್ತ್. ಕೂಸುನ ಮೈಲಿ ಬಿಳಿ ರಕ್ತ ಕಣ ಜಾಸ್ತಿ. ಸರಿಯಾದ ಮೊದ್ದು ಮಾಡದಿದ್ದರೆ ಕೂಸುನ ಜೀವಕೆ ಅಪಾಯಂತ ಗೊತ್ತಾತ್. "ಅಷ್ಟಕೆ ಮರ್ಡುದು ಯಾಕೆ? ಗಂಡನ ಹಕ್ಕಲೆ ಸರಿಯಾಗಿ ಮೊದ್ದು ಮಾಡುವಾಂಗೆ ಹೇಳ್" ಆಸ್ಪತ್ರೆಂದ ಹೊರಗೆ ಬಂದ್ ಹೇಳ್ತ್ "ಯಾಕೆ ಬೇಜಾರ್, ನೀವು ಹಿಂಗೆ ಮಾಡಿರೆ ಕೂಸುಗೆ ಇದ್ಕೆಂದ ಅಪಾಯ"

ಲಕ್ಷ್ಮಿಗೆ ಬೇಜಾರಾಗಿ ಏನೂ ಮಾತಾಡ್ತ್‌ಲೆ. "ಸರಿ ನಂಗೆ ಆಫೀಸ್‌ಗೆ ಹೊತ್ತಾದೆ." ಹೇಳುವ ಹೊತ್ತಿಗೆ ಶ್ರೀ ಲಕ್ಷ್ಮಿ ಮನೆ ಕಡೆ ಹೋಗುವ ಬಸ್ಸ್ ಬಂದ್ ನಿತ್ತತ್. ಆತ್ಮೀಕ್

ಅವಳ ಕೈಗೆ ಫೋನ್ ನಂಬರ್ ಕೊಟ್ಟಿತ್. ಅವಳ ಬಸ್ಸ್ ಹತ್ತಿಸಿ ಆಫೀಸ್ ಕಡೆ. ಆತ್ಮೀಕ್ ನಡ್ತ್. ಅಂದ್ ಅವಂಗೆ ಆಫೀಸ್‌ಗೆ ಹೋದರು ಶ್ರೀ ಲಕ್ಷ್ಮಿ ಕೂಸುನ ನೆನ್ಪ್ ಅಗ್‌ತ್ತಿತ್ತ್.

ಕೆಲ್ಸ ಮುಗ್ಸಿ ಮನೆಗೆ ಬಂದ ಆತ್ಮೀಕ್‌ನ ಮೋರೆಲಿ ಏನೋ ಒಂದ್ ತರದ ಕುಸಿ. ಇನ್ನೊಂದ್ ಕಡೆಲಿ ಏನೋ ಕಳ್ಕಂಡವರ ಹಾಂಗೆ ಎದ್ದ್ ಕಾಂಬೊತಿತ್ತ್. ಅವನ ಅಮ್ಮ "ಏನ್ ನೀ ಮಾಮುಲಿನ ಹಂಗೆ ಇಲ್ಲೆ ಎಂತ ಆತ್?" "ಅಮ್ಮ ನಮ್ಮ ಧನಿಗಳ ಮಗಳ್ ಶ್ರೀ ಲಕ್ಷ್ಮಿ ಮಾತಾಡಿಕೆ ಸಿಕ್ಕಿತ್." "ಹೌದಾ! ಹೆಂಗಿಟ್ಟು ಈ ಊರ್‌ಗೆ ಹೆಂಗೆ ಬಾತ್ ಮೊದ್ವೆ ಆವುಟಾ!" ಬಾರಿ ಕುಸಿಂದ ಕೇಳ್ದ. ಶ್ರೀ ಲಕ್ಷ್ಮಿನ ಕಂಡರೆ ತುಂಬಾ ಕುಸಿ ಅವನ ಅಮ್ಮಂಗೆ. "ಹೌದ್‌ಮ್ಮ ಶ್ರೀ ಲಕ್ಷ್ಮಿಗೆ ಮೊದ್ವೆ ಆಗಿ ಎರಡ್ ಮಕ್ಕ ಒಳ. ಒಂದ್ ಕೂಸುಗೆ ಹುಷಾರ್ ಇಲ್ಲದೆ ಮೊದ್ದು ಮಾಡ್ಸ್‌ತ್ತಾ ಉಟ್ಟು.. ಆದರೆ ಅವಳ ಮನ್ಸ್‌ಗೆ ಕುಸಿಂತ ಇಲ್ಲೆ ಅವಳ ಮೋರೆ ನೋಡ್‌ಕನ ಗೊತ್ತಾದೆ. ಗಂಡ ಕಂಪೆನಿಲಿ ಕೆಲ್ಸ ಮಾಡ್ತ ಉಟ್ಟು.

ಇದರೆಲ್ಲ ಕೇಳ್ದ ಅವನ ಅಮ್ಮಂಗೂ ಬೇಜರ್ ಅದೆ. ಅಂದ್ ಹಿಂಬೊತ್ತ್‌ಂದ ಕತ್ತಲೆ ಆಕನ ಮುಟ್ಟ ಅವ್ಕೆ ಇಬ್ಬೊರಿಗೆ ಅವಳ ಬಗ್ಗೆ ಮತಾಗಿತ್ತ್.

ಊಟ ಮುಗ್ಸಿದ ಆತ್ಮೀಕ್ ಅಂದ್ ಅವನ ಕೋಣೆನ ಬೇಗ ಸೇರಿಕಂಡಿತ್ತ್. ಅವು ಇಬ್ಬೊರ್ ಸಣ್ಣದಿರ್‌ಕನ ಆಡ್ದ ಆಟ, ಅವಂದಾಗಿ ಅಮ್ಮ ಕೆಲ್ಸಕ್ಕೆ ಹೋಗದೆ ಊರ್ ಬುಟ್ಟ್ ಹೋದ್, ಅವಳ ಅಜ್ಜಿ ಕೈಂದ ತಿಂದ ಬೊಯ್ಗಿಳ್ ಅಟಕೆ ಕರೆಕನ ಜಾತಿ ನಿಂದನೆ ಮಾಡ್ದ್. ಇದರೆಲ್ಲ ನೆನ್ಸಿಕಂಡ್ ಮಲ್ಗಿತ್. ಆತ್ಮೀಕ್ ಬಡತನಲಿ ಬೆಳ್ದ ಹಯ್ದ ಕೀಳ್ ಜಾತಿಗೆ ಸೇರಿದವ ಆಗಿತ್ತ್. ಶ್ರೀ ಲಕ್ಷ್ಮಿನ ಅಪ್ಪ, ಅಮ್ಮ, ಅಜ್ಜಿ ಹೇಳ್ದ್‌ಂಗೆ ಕೇಳಕಾಗಿತ್. ಅಜ್ಜಿ ಹಾಕಿದ ಗೆರೆನ ಸೊಸೆ ದಾಟುವಾಂಗೆ ಇತ್ಲೆ. ಹಾಂಕರ ತುಂಬಿದ ಅಜ್ಜಿ ಅಗಿತ್ತ್. ಶ್ರೀ ಲಕ್ಷ್ಮಿ ತುಂಬಾ ರೂಪಾವತಿ ಆಗಿತ್ತ್. ಅವಳ ಪೊರ್ಲುನ ನೋಡಿರೆ ಮತ್ತೆ ಮತ್ತೆ ನೋಡಿಕಂಡ್ ಇರುವ ಹಂಗೆ ಇತ್ತ್.

ಇವಳ ಮನೆ ಹಿಂದೆನ ಕೊಟಿಗೆಲಿ ಇವ್ಕೆ ಒಳಿಯಕೆ ಜಾಗೆ ಕೊಟ್ಟಿದ. ಶಾಲೆಗೆ ಒಟ್ಟಿಗೆ ಹೋಗಿ ಒಟ್ಟಿಗೆ ಬರ್ತಿದ್ದ ಶಾಲೆಗೆ ಹೋಕನ ಆತ್ಮೀಕ್‌ಗೆ ಊಟ ಮಾಡಿಕೆ ಸರಿಯಾದ ಬುತ್ತಿ ಇತ್ಲೆ. ಶ್ರೀ ಲಕ್ಷ್ಮಿ ಯಾಗೋಳ್ ತರತರದ ತಿಂಡಿ ಅನ್ನ ಸಾಂಬಾರ್‌ಗಳ ತರ್ತಿತ್ತ್. ಇವು ಒಟ್ಟಿಗೆ ಸೇರಿಕಂಡ್ ಬಿಚ್ಚಿ ಊಟ ಮಾಡ್‌ತ್ತಿದ್ದ. ಒಂದ್ ದಿನ ಇಬ್ಬೊರ್ ಆಟ ಆಡಿಕಂಡ್ ಶ್ರೀ ಲಕ್ಷ್ಮಿ ಅವಳ ಮನೆ4 ಒಳೆಗೆ ಕಾಣದಾಂಗೆ ಕುದ್ದಿತ್. ಆತ್ಮೀಕ್ ಅವಳ ಹುಡ್ಕಿಕೆ ಅವಳ ಮನೆ ಒಳೆಗೆ ಹೋತ್. ಅಜ್ಜಿಗೆ ಸಿಟ್ಟ್ ಬಂದ್ ಶ್ರೀ ಲಕ್ಷ್ಮಿನ ಕೋಣೆಗೆ ಎಳ್ಕಂಡ್ ಹೋಗಿ ಬಾಗಲ್ ಹಾಕಿ ಹೊರೆಗೆಂದ ಚಿಲ್ಕ್ ಹಾಕಿ ಕೋಣೆಲಿ ಕುದ್ರುವಾಂಗೆ ಮಾಡ್ದ.

"ಛೆ ಯಾಕೆ ಇವಳಿಗೆ ಇಷ್ಟ್ ಹಿಂಸೆನ ಕೊಟ್ಟದೆ ಈ ಅಜ್ಜಿ? ಇನ್ನ್ ಮುಂದೆ ಅವಳ ಒಟ್ಟಿಗೆ ಸೇರ್ದುಲೆಂತ" ನಿರ್ಧಾರ ಮಾಡ್ತ್. ಮಾರನೆ ದಿನ ಶಾಲೆಗೆ ಹೋಗುವ ಹೊತ್ತಿಗೆ ಅವಳ ಬುಟ್ಟ್ ಹೋತ್. ಅವಳ ಬುತ್ತಿಗೆ ಪಾರ ಕಾತ್ಲೆ. ಅವಳ ಮೋರೆಲಿ ತುಂಬಾ

## ಹೊಸ ಬೊದ್ಕು

ಬೇಜಾರ್ ಕಾಂಬೊತಿತ್. ಮಧ್ಯನದ ಹೊತ್ತ್ ಶಾಲೆಲಿ ಊಟಕೆ ಬೆಲ್ಲ್ ಹೊಡ್ದಿದ್ದ.

ಎಲ್ಲ ಮಕ್ಕ ಅವರವರ ಬುತ್ತಿಗಳ ತಕಂಡ್ ಹೋದರೆ ಅತ್ಮೀಕ್ ಶಾಲೆ ಜಗ್‌ಲ್ ತಲೆಲಿ. ಏನೋ ಮಾಡಿಕಂಡ್ ಇತ್ತ್. "ಆತ್ಮೀ ಯಾಕೆ ನಿ ಅಲ್ಲಿ ಒಳ. ಬಾ ಊಟ ಮಾಡ್. "ಬೇಡ ನಂಗೆ ಹೊಟ್ಟೆ ಇಸುದುಲೆಂತ ಅಲ್ಲೆ ಕುದ್ದಿತ್. "ನೀ ಊಟಕೆ ಬಾರದಿದ್ದರೆ ನಂಗೂ ಊಟ ಬೇಡ" ಹಠ ಹಿಡ್ದ್ ಅವಳು ಕುದ್ದಿತ್. "ಲಕ್ಷ್ಮಿ ಇದ್ ನಿನ್ನ ತಪ್ಪ್ ಅಲ್ಲ. ನನ್ನ ಜಾತಿನ ತಪ್ಪ್" ಶ್ರೀ ಲಕ್ಷ್ಮಿನ ಮನ್ಸ್‌ಗೆ ಬೇಜಾರ್ ಆಗಿತ್.

ಇಬ್ಬೊರ್ ಜೋಸ್ತಿತನ, ಪ್ರೀತಿ, ನಂಬಿಕೆ ವಿಶ್ವಾಸಲಿ, ಒಟ್ಟಿಗೆ ಸೇರಿ ಊಟ ಮಾಡ್ದ. ಮಾರನೆ ದಿನ ಶ್ರೀ ಲಕ್ಷ್ಮಿ ಶಾಲೆಗೆ ರೆಡಿ ಆದರೆ ಅತ್ಮೀಕ್ ಊರ್ ಬುಡಿಕೆ ರೆಡಿ ಆಗ್ತಿತ್ತ್. ಅವನ ಮನೆಗೆ ಹೋಗಿ ನೋಡಿ "ಅರೇ! ಆತ್ಮೀ ಶಾಲೆಗೆ" "ಇಲ್ಲೆ ಲಕ್ಷ್ಮಿ ನಾ ರಜೆ ಹಾಕಿದೆ." "ನಿಮ್ಮ ಅಜ್ಜಿ ಕೆಲ್ಸಕೆ ಬಾದು ಬೇಡಾಂತ ಹೇಳ್ದ ಲಚ್ಚಕ್ಕ. ಮತ್ತೆ ನಾವು ಯಾಕೆ ಇಲ್ಲಿ ಇರ್ದು? ಬೇರೆ ಕಡೆ ಕೆಲ್ಸಕೆ ಹೋಗ್ತ ಒಳ." ಅತ್ಮೀಕ್‌ನ ಅಮ್ಮನ ಮಾತ್ ಕೇಳ್ದ ಶ್ರೀ ಲಕ್ಷ್ಮಿ ಮರ್ಡಿಕೆ ಸುರು ಮಾಡ್ತ್.

"ಲಕ್ಷ್ಮಿ ಮರ್ಡ್‌ಬಡ ನನ್ನ ನೆನ್ಪ್‌ಗೆ" ಅಂದ್ ಹೋಯ್ಯಿಗೆಲಿ ಮಾಡ್ದ ಸಣ್ಣ ಮೊಣ್ಣ್‌ನ ದೀಪನ ಅವಳ ಕೈಗೆ ಕೊಟ್ಟಿತ್. ಶ್ರೀ ಲಕ್ಷ್ಮಿ ಅವಳ ತಲೆಗೆ ಅಜ್ಜಿ ಮುಡ್ಸಿದ ಗುಲಬಿ ಹೂವು ತೆಗ್ದ್ ಅವನ ಜೋಬುಗೆ ಹಾಕಿತ್. ಆತ್ಮೀಕ್ ಅಮ್ಮ ಗಂಟ್ ಮೂಟೆಗಳ ತಕಂಡ್ ದನಿಗಳ ಮನೆಗೆ ಹೋಗಿ ಅವಳ ಅಪ್ಪ, ಅಮ್ಮಂಗೆ ಹೇಳಿ ಹೋದ. ಅಜ್ಜಿಗೆ ತುಂಬಾ ಕುಸಿ ಆತ್.

ಆತ್ಮೀಕ್‌ನ ಬೆನ್ನ್ ಕಾಣ್‌ವಲ್ಲಿವರೆಗೆ ಅಲ್ಲೆ ನಿತ್ತ್ ಕಲ್ಲಾದ ಶ್ರೀ ಲಕ್ಷ್ಮಿನ ಆಗಾಗ ತೀರ್ಗಿ ನೋಡ್ದ್ ಆತ್ಮೀಕ್‌ಗೆ ಟಾ. ಟಾ ಮಾಡ್ತಿತ್ತ್. ಅಜ್ಜಿಗೆ ಹೊಟ್ಟೆಲಿ ಕಿಚ್ಚಿ ಹೊತ್ತಿಕಂಡೆ ಇತ್ತ್. ಅಜ್ಜಿ ಎನೇನೋ ಹೇಳೀಕಂಡ್ ಬೊಯೊಕೆ ಸುರು ಮಾಡ್ತ್. ಅಂದ್ ಕತ್ತಲೆಗೆ ಶ್ರೀ ಲಕ್ಷ್ಮಿಗೆ ಕಂಡದ್ದ್ ಆತ್ಮೀಕ್. ಮನ್ಸ್‌ಲಿ ಅಲ್ಲ. ಕನ್ಸ್‌ಲಿ ಕತ್ತಲೆಗೆ ಕನ್ಸ್‌ಲಿ "ಆತ್ಮೀ.."ಂತ ಕರ್ದಿತ್ತ್. ಮತ್ತೆ ಅವಳ ಮೋರೆಲಿ ಯಾಗೋಳ್ ಅಷ್ಟೊಂದ್ ಹರ್ಷ ಇತ್ತೆ. ಹಿಂಗೆ ಸುಮಾರ್ ವರ್ಷ ಕಳ್ದ ಮೇಲೆ ಆತ್ಮೀಕ್ ಒಂದ್ ಕಾಗದ ಬರ್ದ್ ಹಾಕಿತ್. ನನ್ನ ವಿಳಾಸ ಇನ್ನೊಂದ್ ಕಾಗದಲಿ ಬರ್ದ್ ಹಾಕಿನೆಂತ ಇತ್ತ್. ಮತ್ತೆ ಬರ್ದ ಕಾಗದ ಅವಳ ಕೈ ಸೇರ್‌ತಿತ್ತೆ. ಕಾಗದಗಳ ಅವಳ ಅಜ್ಜಿ ಹರ್ದ್ ಹಾಕ್‌ತಿತ್ತ್.

"ಇನ್ನ್ ಮುಂದೆ ನಂಗೆ ಕಾಗದ ಬರಿದು ಬೇಡ. ನಂಗೆ ಮೊದ್ವೆ ನಿಗಂಟ್ ಆತ್ ಇನ್ನ್ ಈ ಊರ್‌ಲಿ ನಾ ಇರ್ದುಲೆ" ಅತ್ಮೀಕ್‌ಗೆ ಅಜ್ಜಿ ಕಾಗದ ಬರ್ದ್ ಹಾಕಿತ್ ಸತ್ಯ ನಂಬಿದ ಆತ್ಮೀಕ್ ಕಾಗದ ಬರಿದರ ನಿಲ್ಸಿತ್.

* * * * *

## ಹೊಸ ಬೊದ್ಕು

ಶ್ರೀ ಲಕ್ಷ್ಮಿನ ಪೋನ್ ನಂಬರಿಗೆ ಅತ್ಮೀಕ್ ಕಾಲ್ ಮಾಡಿತ್. ಅವಳ ಎಡ್ರಾಸ್ ಕೇಳಿ, ಎಡ್ರಾಸ್‌ಗೆ ಸರಿಯಾಗಿ ಅವಳ ಮನೆಗೆ ಹೋತ್. ಒಂದ್ ಮೂಲೆಲಿ ಸಣ್ಣ ಮನೆ ಬಾಗ್‌ಲ್ ತೆಕ್ಕಂಡ್ ಇತ್ತ್. ಕೂಸೊಂದ್ ಆಟ ಆಡಿಕಂಡ್ ಇತ್ತ್. ಇನ್ನೊಂದ್ ಮೂಲೆಲಿ ಕೂಸು ಮಲ್ಕಿಂಡ್ ಇತ್ತ್. "ಮನೆವು ಯಾರ್ ಒಳರಿ" "ಓ ಆತ್ಮೀ ಬಂದನಾ ಬಾ ಒಳಗೆ" ಒಳಗೆ ಕರ್ದ್ ಕುದ್ರಿಕೆ ಹೇಳಿ ಚಾ ತಿಂಡಿಗಳ ತಂದ್ ಇಬ್ಬೋರ್ ಮಾತ್‌ಗೆ ಇಳ್ದ.

"ನಿನ್ನ ಯಜಮಾನ್ರ್ ಎಲ್ಲಿ?" "ಅವು ಹೊರಗೆ ಹೋಗಳ ಹಂಞ ಹೊತ್ತ್‌ಲಿ ಬರುವ" ಕೊಟ್ಟ ಚಾಯ ಕುಡಿವ ಹೊತ್ತಿಗೆ ಹೊರಗೆ ಹೋದ ಅವಳ ಶಾಮ ಬಾತ್. ಆತ್ಮೀಕ್‌ನ ನೋಡಿರು ನೋಡದವರ ಹಂಗೆ ಸೀದಾ ಒಳಗೆ ಹೋಗಿತ್ತ್.

ಶ್ರೀ ಲಕ್ಷ್ಮಿ ಆತ್ಮೀಕ್‌ನ ಮೋರೆ ನೋಡಿ "ನಿ ಏನೂ ತಿಳ್ಕಂಬಡ ಅವರ ಸ್ವಭಾವ ಯಾಗೋಳ್ ಹಂಗೆ" ಅತ್ಮೀಕ್‌ಗೆ ಸಮಧಾನ ಹೇಳೀತ್ತ್.

"ಯಾಕೆ ಅವನ ಮಾತಾಡ್ಸಿತ್ಲೆ ನಾವಿಬ್ಬೊರ್ ಒಟ್ಟಿಗೆ ಆಟ ಆಡಿಕಂಡ್ ಇದ್ದ ನನ್ನ ಜೋಸ್ತಿ ಮಾತಾಡ್ಸಿ" ಒಳೆಗೆ ಹೋಗಿ ಹೆಳಿತ್ತ್. ಅವಂಗೆ ಮಾತಾಡ್ಸಿಕೆ ಮನ್ಸ್ ಇತ್ಲೆ.

"ನಿನ್ನ ಸಂಬಂದದವು ಈ ಮನೆಗೆ ಬಾಕೆ ಆಗದ್‌ಂತ ಅಂದೇ ಹೇಳ್ತ್‌ಲೆನ?" " ಅವು ನನ್ನ ಕಡೆವು ಅಲ್ಲ ಒಮ್ಮೆ ಮತಾಡ್ಸಿ" ಗಂಡನ ಒಟ್ಟಿಗೆ ಬೇಡಿಕಂಡತ್

ಅಂತೂ ಹೆಣ್ಣ್‌ನ ಒತ್ತಾಯಕೆ ಮತಾಡ್ಸಿಕಂಡತ್ತ್. ಯಾಕೋ ಈಗ ಅವಂಗೆ ಸಂಶಯ ಶ್ಯಾಮ ಅವನ ಕೋಣೆ ಹೋಗಿ ಸೇರ್ತ್.

"ಈಗ ಕೂಸು ಹೆಂಗೆ ಉಟ್ಟು ಆಸ್ಪತ್ರಗೆ ಹೊತ್ಲೆನಾ? ಇಲ್ಲೆ ಅವರ ಹಕ್ಕಲೆ ದುಡ್ಡ್ ಇಲ್ಲೆಂತ ಹೇಳ್ದ "ಯಾಕೆ ಗಂಡ ಕೆಲ್ಸ  ಮಾಡ್ದುಲೆನ!" "ಇಲ್ಲೆ ಅವು ಕೆಲ್ಸ ಬುಟ್ಟ್ ತುಂಬಾ ಸಮಯ ಆತ್. ಕೆಲ್ಸಕೆ ಸೇರ್ದ್‌ಲ್ಲಿ ಅವ್ಕೆ ಯಾಗೋಳ್ ಸರಿ ಆದುಲೆ. ಯಾರ ಮಾತ್ ಕೇಳ್‌ವ ಜನ ಅವು ಅಲ್ಲ. ಇವರ್‌ಂದಾಗಿ ನಮ್ಮ ಜೀವನ ಬಾರೀ ಕಷ್ಟಲಿ ಸಾಗುತ್ತಾ ಉಟ್ಟು. ಮನೆಲಿ ತಿಂಬಕೆ ಒಂದ್ ಇದ್ದರೆ, ಇನ್ನೊಂದ್ ಇಲ್ಲೆ. ಹಂಗೆ ಅವುಟು ನಮ್ಮ ಪರಿಸ್ಥಿತಿ. ಬೊದ್ಕಿರೆ ಬೊದ್ಕ್‌ಲಿ, ಸತ್ತರೆ ಸಾಯಲಿಂತ, ಕೂಸುಗೆ ಹೇಳ್ತ ಒಳ" ಅವಳ ಗಂಟ್ಲ್ ಕಟ್ಟಿ ಹೋತ್, ಮೋರೆ ಸಣ್ಣದಾತ್.

ಆತ್ಮೀಕ್‌ಗೆ ಕಣ್ಣ್‌ಂದ ನೀರ್ ಹನ್ಸ್‌ಕ್ತಿತ್ತ್. "ದೇವ್ರು  ಮೊನ್ಸ್‌ಂಗೆ ಇಷ್ಟೆಲ್ಲ ಕಷ್ಟ ಕೊಟ್ಟದೆನಾ!" ಮನ್ಸ್‌ಲಿ ನೆನ್ಸಿ ಅವಂಗೆ ಸರಿ ಆಕೆ ಒಂದೆರ್‌ಡ್ ನಿಮಿಷ ಬೇಕಾಯ್ತ್. "ಸಮಧಾನ ಮಾಡಿಕ ಲಕ್ಷ್ಮಿ ಮನ್ಸ್‌ಗೆ ದೇವ್ರು ಒಳ ನಿಂಗೆ. ಒಂದ್ ದಿನ ಆದರೂ ಸುಖದ ಜೀವನ ಬಾದು. ನಂಗೆ ಇಂದ್ ಅರ್ಜಂಟ್ ಕೆಲ್ಸ ಉಟ್ಟು ಇನ್ನೊಮ್ಮೆ ಬನ್ನೆ."ಂತ ಹೇಳಿ ಹೊರ್ಟ್ ಹೋತ್ ಮತ್ತೆ ಅಲ್ಲಿ ನಿಲ್ಲಿಕೆ ಅಗದಷ್ಟ್ ಬೇಜರ್ ಆಗಿ ಎದೆ ಒಳೆಗೆ ಭಾರ ಆಗಿ ನಿತ್ತಿತ್ತ್. ಅಂದ್ ಕತ್ತಲೆಗೆ ಮನೆ ಸೇರ್ದ ಆತ್ಮೀಕ್ ಕಳ್ದ್ ಎಲ್ಲ ವಿಷಯಗಳ ನೆನ್ಪ್ ಮಾಡಿ ಒಂದ್ ನಿರ್ಧಾರಕ್ಕೆ ಬಾತ್. ಅವನ ಹಕ್ಕಲೆ ಇದ್ದ ದುಡ್ಡುಗಳಜೋಡ್ಸಿ ಒಂದ್ ದಿನ ಅವಳ ಮನೆಗೆ ಹೋಗಿ

ಅವಳ ಕೈಗೆ ದುಡ್ಡು ಕೊಟ್ಟಿತ್. ಶ್ರೀ ಲಕ್ಷ್ಮಿ ದುಡ್ಡ್ ತಕಂಬಕೆ ಒಪ್ಪಿತ್ಲೆ. ಆತ್ಮೀಕ್‌ನ ಒತ್ತಾಯಕೆ, ಕೂಸುನ ಒಳ್ಸಿಕಂಬ ಆಸೆಲಿ ತಕಣ್‌ತ್ತ್." ಈ ದುಡ್ಡುನ ನಂಗೆ ಕೊಡ್ದುಬೇಡ. ನಿನ್ನ ಕೂಸು ಹುಷಾರ್ ಆದರೆ ಸಾಕ್" ಧೈರ್ಯ ತುಂಬಿಸಿ ಆತ್ಮೀಕ್ ಮನೆ ಕಡೆ ಹೊರ್ಟ್‌ತ್. ಶ್ಯಾಮ ಮನೆಗೆ ಬಂದ ಮೇಲೆ ಈ ವಿಚಾರನ ಅವಂಗೆ ತಿಳ್ಸಿತ್. ಅವನ ಮನ್ಸ್ ಒಪ್ಪಿತ್ಲೆ . ನಾವ್ಗೆ ದುಡ್ಡ್ ಕೊಡಿಕೆ ಅವ ಯಾರ್? ನಮ್ಮ ಕೂಸುನ ಮೇಲೆ ಹೊಟ್ಟೆ ಉರಿ ಮಾಡಿಕೆ ಅವಂಗೆ ಏನ್ ಸಂಬಂಧ? ಕೂಸು ಅವಂಗೆ ಹುಟ್ಟಿದಾ? ನಂಗೆ ಹುಟ್ಟಿದಾ? ನೀ ಇಷ್ಟ್ ದಿನ ಯಾರ ಒಟ್ಟಿಗೆ ಸಂಸಾರ ನಡ್ಸಿದ್? ಅವ ನಿನ್ನ ಜೋಸ್ತಿನ? ಗಂಡನ? ಅವನ ಒಟ್ಟಿಗೆ ಹೋಕೆ ಮನ್ಸ್ ಇದ್ದರೆ ಹೋಗ್. ನನ್ನಂದ ಏನ್ ಅಡ್ಡಿ ಇಲ್ಲೆ. ಮನ್ಸ್‌ಗೆ ಬಂದಾಂಗೆ ಕೆಟ್ಟ ರೀತಿಲಿ ಹೊಡೆಯಕೆ ಸುರು ಮಡ್ತ್. ಶ್ರೀ ಲಕ್ಷ್ಮಿಗೆ ಅಂದ್ ಊಟ, ನಿದ್ದೆ ಮಾಡಿಕೆ ಯಾವುದಕ್ಕೂ ಮನ್ಸ್ ಇತ್ಲೆ. ಅವಳಿಗೆ ಕೊಟ್ಟ ಕಷ್ಟ. ಹೇಳ್ದ ಮಾತ್, ಕೂಸುನ ಕಾಯಿಲೆ, ಇದರೆಲ್ಲ ನೆನ್‌ಸಿಕಂಡ್ ಹೇಳ್ತಿತ್ತ್. "ನಾವ್ಗೆ ಇಷ್ಟೊಂದ್ ಉಪಕಾರ ಮಾಡವು ನಾವ್ಗೆ ಯಾರ್ ಒಳ? ತೌವ್ರು ಮನೆಗೆ ಹೋಗುವ ಆಸೆ ಅಂತು ಇಲ್ಲೆ.

ನನ್ನ ಮನೆತನ ಅಷ್ಟ್ ದೊಡ್ಡದಾದರು, ಇಂದ್ ನಂಗೆ ಹಂಗ್‌ಲಿ ಬೊದ್ಕುವ ಕಾಲ ಬಾತ್. ಹೆಣ್ಣ್ ಮಕ್ಕಳ ಕಷ್ಟನ ಯಾರ ಒಟ್ಟಿಗೆ ಹೇಳ್ದು . ರಾತ್ರಿ ಇಡೀ ಮರ್ಗ್ಟ್ ಅವಳಿಗೆ ಅವಳೇ ಸಮಧಾನ ಮಾಡಿಕಂಡಿತ್ತ್. "ಇವ್ಕೆ ಸರಿ ಆಗಿ ಎಲ್ಲಿ ಕೂಡ ಕೆಲ್ಸ ಮಾಡಿಕಾದ್ಲೆ. ಇದ್ದವರ ಕೈಯಿಂದ ಸಾಲ ತಕಂಡ್ ಜಾಲಿ ಮಾಡುವೆ. ಹೆಣ್ಣ್ ಮಕ್ಕಳ ಮೇಲೆ ಯಾವ ಕನಿಕರ ಇಲ್ಲೆ. ಇನ್ನೊಬ್ಬರ ಉಪಕಾರನ ಅರ್ಥ ಮಾಡಿಕಂಬದ್ಲೆ. ಉಪಕಾರ ಮಾಡ್ರೆ ಸಂಶಯ ಮಾಡಿಕಾತ್, ಇಂತ ಗಂಡನ ಒಟ್ಟಿಗೆ ಹೆಂಗೆ ಬೊದ್ಕುದು?" ಕಣ್ಣೀರ್‌ಲಿ ಕೈ ತೊಳ್ತ್. ತುಂಬಾ ಸಮಯ ಕಳ್ದ ಮೇಲೆ ಹಳೆ ಅತ್ಮೀಯತೆಂದ ಅವಳ ಮನೆಗೆ ಆತ್ಮೀಕ್ ಬಾತ್. ಮನೆ ಮಸಾಣ ಆಗಿತ್. ಗೋಡೆಲಿ ಆಣಿಗೆ ಸೆಕ್ಕಿಸಿ ತೂಗು ಹಾಕಿದ ಕೂಸುನ ಪೋಟ ಇತ್ತ್. ಇದ್ ಆತ್ಮೀಕ್‌ಗೆ ವಿಷಯ ಆಗಳೇ ಗೊತ್ತಾತ್. ॥ಯಾಕೆ ಲಕ್ಷ್ಮಿಕೂಸುನ ಮೊದ್ದ್‌ಗೆ ಕರ್ಕಂಡ್ ಹೋತ್ಲೆನಾ?॥

ಎಲ್ಲಾ ಮುಗ್ದ್ ಹೋತ್ ಆತ್ಮೀ. ಅಹಂಕಾರ ಮಾಡ್ದ ನನ್ನ ಗಂಡ ನೀಕೊಟ್ಟ ದುಡ್ಡ್‌ನ ತಕಣದೆ, ನಿನ್ನ ಬಗ್ಗೆ ಬಾಯಿಗೆ ಬಂದಾಂಗೆ ಕೆಟ್ಟದಾಗಿ ಹೇಳಿ. ನಂಗೆ ಬೇಕಷ್ಟ್ ಹಿಂಸೆ ಕೊಟ್ಟ. ಕೂಸುನ ಕಾಯಿಲೆ ಜಾಸ್ತಿ ಆಗಿ ತೀರಿಹೋತ್ ಆತ್ಮೀ॥ ಅವ ಕೊಟ್ಟ ದುಡ್ಡುನ ಅವಂಗೆ ಕೊಟ್ಟ್. ॥ಇನ್ನ್ ಮುಂದೆ ನಂಗೆ ಬೊದ್ಕಿಕೆ ಕಷ್ಟ ಉಟ್ಟು ಊರ್‌ಲಿ ಕೆಟ್ಟ ಮಾತ್‌ಗ ನನ್ನ ಕೆಬಿಗೆ ಬೀಳ್ತ ಉಟ್ಟು. ನನ್ನ ಗಂಡಂಗೆ ಒಳ್ಳ ಬುದ್ದಿ ಬಾಕನ ಮುಟ್ಟ ನಾ ಬೊದ್ಕಿರೆ ಆಗ ಮತ್ತೆ ಮಾತಾಡಮ. ದಮ್ಮಯ್ಯ ಇನ್ನ್ ಬರ್ಬ್ಡ॥ ಗೊತ್ತಾಗದೆ ಅವನ ಹೊಟ್ಟೆಗೆ ಚೂರಿ ಹಾಕಿದಾಂಗತ್ತ್ ಉತ್ತರ ಹೇಳದೆ ಅವಳ ಮೋರೆನ ಒಮ್ಮೆ ನೋಡಿ ಬೆನ್ನ್ ಹಾಕಿ ಹೊರ್ಟ್ ಹೋತ್. ಅಮ್ಮನ ಒಟ್ಟಿಗೆ ಅವಳಿಗೆ ಕೊಡವ ಕಷ್ಟಗಳ ಹೆಳ್ತ್. ಅಮ್ಮನ ಕಣ್ಣೀರ್ ನೆಲಕ್ಕೆ

ಬೀತ್. ಈಗ ಅವಳ ಗಂಡ ಶ್ಯಾಮ ಇದ್ದವರ ಕೈಂದ ಸಾಲ ತಕಂಡ್ ಎಲ್ಲಿ ಕೂಡ ತಲೆ ತೋರ್ಸಿಕೆ ಆಗದ ಪರಿಸ್ಥಿತಿ ಬಂದಿತ್ತ್. ಯಾವ ದಾರಿ ಕಾಣದೆ ಕಂಪೆನಿಗೆ ಕೆಲ್ಸ ಮಾಡಿಕೆ ಹೋಗಿತ್ತ್ ಶ್ಯಾಮ.

ಅದೇ ಕಂಪೆನಿಲಿ ಆತ್ಮೀಕ್ ಕೆಲ್ಸ ಮಾಡ್ತಿತ್ತ್. ಎಲ್ಲವುಕೆ ಕೆಲ್ಸ ಕೊಡುವ ಕೆಲ್ಸ ಆತ್ಮೀಕ್‌ದಾಗಿತ್ತ್. ಶ್ಯಾಮಂಗೆ, ಆತ್ಮೀಕ್ ಇರುವ ಕಂಪೆನಿಲಿ ಕೆಲ್ಸ ಮಾಡಿಕೆ ಮನ್ಸ್ ಇತ್ಲೆ. ಮಾಡದೆ ವಿಧಿ ಇತ್ಲೆ. ಗಂಡ ಕೆಲ್ಸ ಮಾಡುವ ಕಂಪೆನಿಲಿ, ಆತ್ಮೀಕ್ ಉಟ್ಟುಂತ ಅವಳಿಗೆ ಗೊತ್ತಿತ್ಲೆ. ಆತ್ಮೀಕ್ ಶ್ಯಾಮನ ಜೋಸ್ತಿತನಲಿ ನೋಡಿಕಂಡರೆ ಅವನ ವಿರೋಧದವರ ಹಂಗೆ ಶ್ಯಾಮನ ನಡ್ತೆ ಇತ್ತ್. ಒಂದ್ ದಿನ ಕೆಲ್ಸ ಮುಗ್ಸಿ ಶಾಮ ಮನೆಗೆ ಬಾಕನ ಕೊಟ್ಟ ಸಾಲನ ಕೇಳಿಕೆ ಏಳೆಂಟ್ ಜನ ನೆಡು ದಾರೀಲಿ ಪಾರ ಕಾದ್ ಕುದ್ದಿದ್ದ. ಇವ್ಕೆ ಎದ್‌ರ್ ಉತ್ತರ ಕೊಟ್ಟ ಶ್ಯಾಮನಂಗೆ ಇಷ್ಟ ಬಂದಾಂಗೆ ಹೊಡ್ದ್ ಮೂಕುಲಿ, ಬಾಯಿಲಿ, ರಕ್ತ ಬರುವಾಂಗೆ ಹೊಡ್ದ್ ಹಾಕಿ ಹೋಗಿದ. ತುಂಬಾ ರಕ್ತ ಸೊರ್‌ತ್ತಿದ್ದ ಶ್ಯಾಮಂಗೆ ಸೊಯ ತಪ್ಪಿ ಅಲ್ಲೇ ಬಿದ್ದ್ ಹೋಗಿತ್. ಆದೇ ದಾರೀಲಿ ಹಿಂಬೊತ್ ಆತ್ಮೀಕ್ ಕೆಲ್ಸ ಬುಟ್ಟ್ ಬಾಕನ ಗುರ್ತ ಸಿಕ್ಕದ ತರಲಿ ಬಿದ್ದ ಶ್ಯಾಮನ ಆಸ್ಪತ್ರೆಗೆ ಸೇರ್ಸಿದ ಕೂಡ್ಲೆ ಶ್ರೀ ಲಕ್ಷ್ಮೀ ಅಚ್ಚರಿ! "ಆತ್ಮೀ" "ಹೌದ್ ನಾನೇ ನಿಂಗೆ ಪೋನ್ ಮಾಡ್ದ್ ನಾನು ಇವನ ಒಟ್ಟಿಗೆ ಕೆಲ್ಸ ಮಾಡ್ದು" ದಾರೀಲಿ ನಡ್ದ ವಿಷಯನ ಇವಳ ಒಟ್ಟಿಗೆ ಹೇಳುವ ಹೊತ್ತ್‌ಲಿ ಡಾಕ್ಟರ್ "ಯಾರ್ ಶ್ಯಾಮನ ಕಡೆವು"ಂತ ಕರ್ದಿದ್ದ. ಶ್ರೀ ಲಕ್ಷ್ಮೀ ಡಾಕ್ಟರ ಕೋಣೆಗೆ ಹೋತ್. "ಇವನ ಸ್ಥಿತಿ ಗಂಭೀರ ರಕ್ತ ಕೊಡದಿದ್ದರೆ ಬೊದ್ಕುವ ಸಾಧ್ಯ ಇಲ್ಲೆ" ಡಾಕ್ಟರ್ ಮಾತ್ ಕೇಳಿ ಸಂಕಟ ಹತ್ತಿತ್ ಅವಳ ಕೈಲಿ ದುಡ್ಡ್ ಇತ್ಲೆ. ಶ್ರೀ ಲಕ್ಷ್ಮೀನ ಒಳ್ದ ಕೂಸೂನ ಮೋರೆ ನೋಡಿ ಆತ್ಮೀಕ್ ರಕ್ತ ಕೊಡಿಕೆ ಒಪ್ಪಿಕಂಡಿತ್. ಅವರಿಬ್ಬರ ರಕ್ತದ ಗುಂಪು ಒಂದೇ ಆಗಿತ್ತ್. ಇವಳ ಎಲ್ಲ ಕಷ್ಟಗಳಿಗೆ ಉತ್ತರ ಆಗಿ ನಿತ್ತ್ ಆತ್ಮೀಕ್, ರಕ್ತ ಕೊಟ್ಟ್ ಹೊರೆಗೆ ಬಂದ್ "ಲಕ್ಷ್ಮೀ ನಿನ್ನ ಗಂಡ ಹುಷಾರ್ ಆದೆ. ಈಗ ನಂಗೆ ಬೇರೆ ಕಡೆ ಕೆಲ್ಸ ಸಿಕ್ಕಿತ್. ನಾನು, ಅಮ್ಮನು, ಅಲ್ಲಿಗೆ ಹೋದವೆ. ಶ್ಯಾಮ ಹುಷಾರಾದ ಮೇಲೆ ನಾ ಕೇಳ್ದೆಂತ ಅವಂಗೆ ಹೇಳ್ ಇನ್ನ್ ನಾ ಯಾಗ ಕಾಂಬಕೆ ಸಿಕ್ಕಿನೆಂತ ಹೇಳಿಕೆ ಆದ್ಲೆ. ಶ್ರೀ ಲಕ್ಷ್ಮೀನ ಕೈ ಹಿಡ್ದ್ ಹಳೆ (ಜೋಸ್ತಿತನನ ನೆನ್ಪ್ ಮಾಡಿಕಂಡತ್.

ಅವಳ ಮನ್ಸ್‌ಲಿ ಎಷ್ಟೋ ದೊಡ್ಡ ಆಧಾರನ ಕಳ್ಕಂಡ ಹಂಗೆ ಆಗಿತ್ತ್. ಕಣ್ಣ್‌ಲಿ ನೀರ್ ಸುರ್ಸಿ "ಮುಂದಿನ ಜನ್ಮಲಿ ಆದರೂ ನಾವು ಇಬ್ಬೊರ್ ಅಣ್ಣ, ತಂಗೆ, ಆಗಿ ಹುಟ್ಟಿ ಬರುವ ಹಂಗೆ ಆದೇವ್ರು ಮನ್ಸ್ ಕೊಡಲಿಂತ ನೆನ್ಸಿಕಂಡಿತ್ತ್. ಅವಳ ಬೇಜಾರ್, ಅವನ ಮೇಲೆ ಇದ್ದ ಪ್ರೀತಿನ ಲಾಯ್ಕಲಿ ಅರ್ಥ ಮಾಡ್ದ್ ಆತ್ಮೀಕ್ "ಒಳ್ದ ಕೂಸೂನ ಸರಿಯಾಗಿ ಶಾಲೆಗೆ ಕಳ್ಸಿ, ಒಂದ್ ದಾರಿಗೆ ಹಾಕಿ ಅವಳ ಕಾಲ್ ಮೇಲೆ ನಿಲ್ಲ್‌ವಾಂಗೆ ಮಾಡಿಕ ಒಳ್ಳೆದಾದಿಯ ನೀ ನಿನ್ನ ಕೂಸುನ ಹೆಂಗೆ ನೋಡಿಯ ಹಂಗೆ ನಿನ್ನ ಅವಳೇ ನೋಡಿಕಂಬದು" ಆರ್ಶೀವಾದ ಮಾಡಿ ಮತ್ತೊಮ್ಮೆ ಅವಳ ಕೈಮುಟ್ಟಿ ಮನೆ ಕಡೆ ಹೋತ್ ತಿರ್‍ಗಿ ಹೋದ

## ಹೊಸ ಬೊದ್ಕು

ಆತ್ಮೀಕ್‌ನ ಬೆನ್ನ್ ಕಾಣುವರೆಗೆ ನಿತ್ತ್ ನೋಡ್ತ್ ಶ್ರೀ ಲಕ್ಷ್ಮೀ.

"ಎಲ್ಲಿ ಶ್ಯಾಮನ ಕಡೆವು" ಮತ್ತೊಮ್ಮೆ ಡಾಕ್ಟರ ಸ್ವರ ಕೇಳ್ತ್. ಶ್ರೀ ಲಕ್ಷ್ಮಿ ಒಳೆಗೆ ಹೋಕನ ಶ್ಯಾಮ ವಾರ್ಡ್‌ಲಿತ್ತ್. ಎಚ್ಚರ ಆದ ಅವಂಗೆ ಏನ್ ಗೊತ್ತಾಗದೆ ಅವಳ ತಬ್ಬಿ ಹಿಡ್ತ್.

"ಹೌದ್ ನೀವು ಆಸ್ಪತ್ರೆಲಿ ಆತ್ಮೀಕ್ ನಿಮ್ಮ ಕರ್ಕ್ಯಂಡ್ ಬಾತ್ ನೀವ್ಗೆ ಬೇಕಾದ ಮೊದ್ದ್, ರಕ್ತ,ಎ ಲ್ಲ ಅವನೆ ಕೊಟ್ಟದ್ ನಾಳೆ ಅಲ್ಲಿಂದ ಬೇರೆ ಕಡೆ ಹೋಗ್ತಾ ಉಟ್ಟು."

"ಹೌದು ಲಕ್ಷ್ಮೀ ಅವನ ತುಂಬಾ ತಪ್ಪಾಗಿ ತಿಳ್ಕಂಡೆ. ಶ್ಯಾಮ, ಶ್ರೀ ಲಕ್ಷ್ಮೀ, ಕೂಸು, ಅವನ ಮನೆಗೆ ಹೋಗಿ ಆತ್ಮೀಕ್‌ನ ತಬ್ಬಿ ಹಿಡ್ದ್, “ನಿನ್ನ ತಪ್ಪಾಗಿ ತಿಳ್ದೆ ಇನ್ನ್ ಮುಂದೆ ನಾ ಮೊನ್ಸ್‌ನಾಂಗೆ ಇದ್ದ್ ನಿನ್ನ ಉಪಕಾರನ ಮರಿಯಕಿಲೆ. ತಪ್ಪುಗೆ ಕ್ಷಮೆ ಕೇಳ್ತ್. ಆತ್ಮೀಕ್‌ಗೆ ಅಚ್ಚರಿ! "ತೊಂದರೆ ಇಲ್ಲೆ ಶ್ಯಾಮ. ಮೊನ್ಸ ಆದವ ಒಂದಲ್ಲ ಒಂದ್  ದಿನ ತಪ್ಪು ಮಾಡೇ ಮಾಡ್ದೆ. ಮತ್ತೆ ಸರಿ ಆದವೆ" ಸಮಧಾನ ಮಾಡಿ ಅವರ ಕೂಸುನ ತೆತ್ತಿಕಂಡತ್ತ್.

"ಆತ್ಮೀ ನೀ ಬೇರೆ ಕಡೆ ಕೆಲ್ಸ ನೋಡ್ಬ್ಯಡ ನಾವು ಒಟ್ಟಿಗೆ ಕೆಲ್ಸ ಮಾಡಮ" "ಇಲ್ಲೆ ಶ್ಯಾಮ ನಂಗೆ ನಾಳೆನೆ ಕೆಲ್ಸಕೆ ಸೇರಿಕೆ ನೋಟಿಸ್ ಬಂದುಟು. ಅದ್ಕೆ ಇಂದೇ ನಾವು ರೆಡಿ ಆಕು". ಆಗಳೇ ಆತ್ಮೀಕ್‌ನ ಮನೆ ಮುಂದೆ ಗಾಡಿ ಬಂದ್ ನಿತ್ತತ್ತ್. ಕೂಸುನ ಕೈಗೆ ದುಡ್ಡು ಕೊಟ್ಟ ಆತ್ಮೀಕ್’ ನಾವು ಎಲ್ಲಿ ಇದ್ದರು ಜೋಸ್ತಿಗಳೇ ಪುರುಸೊತ್ತ್ ಇದ್ದರೆ ಇನ್ನೊಮ್ಮೆ ಬನ್ನಿ" ಅಮ್ಮ ಮಂಜ ಗಾಡಿ ಹತ್ತಿ ಮತ್ತೊಮ್ಮೆ ಅವರ ಮೋರೆ ನೋಡುವಷ್ಟರಲ್ಲಿ ಗಾಡಿ ಹೊರ್ಟ್ತ್. ಗಂಡ ಹೆಣ್ಣ್ ಕೂಸ್ ಮನೆ ದಾರಿ ಹಿಡ್ದ ಗಂಡನ ಒಳ್ಳದಾರಿಗೆ ತಂದ ಆತ್ಮೀಕ್, ಶ್ರೀ ಲಕ್ಷ್ಮೀಗೆ ದೇವರ ರೂಪದಾಂಗೆ ಕಂಡತ್. ಅಂದ್ ಕತ್ತಲೆಗೆ ಹೊಸ ಊರ್‌ಗೆ ಹೋದ ಆತ್ಮೀಕ್‌ಗೆ ಅಲ್ಲಿ ಎಲ್ಲವು ಹೊಸತ್ತ್ ಆಗಿತ್ತ್. ಹೊರೆಗೆ ಬಾಕನ ಎದ್‌ರ್ ಬದರ್ ಕುದ್ದ ಹಕ್ಕಿಗ ಜೀವನ ಮಾಡುವ ತರಲಿ ಮಾತಾಡಿಕಂಡ್ ಇದ್ದ ಹಾಂಗೆ ಕಂಡತ್ತ್. ಅದರ್ನೆ, ನೋಡಿಕಂಡ್ ನಿತ್ತ ಆತ್ಮೀಕ್‌ಗೆ ಶ್ರೀ ಲಕ್ಷ್ಮೀ, ಮತ್ತೆ ಶ್ಯಾಮನ ನೆನ್ಪ್ ಆಗಿ ಶ್ರೀ ಲಕ್ಷ್ಮೀ ಕೊಟ್ಟ ಗುಲಾಬಿ ಹೂವು ನೆನ್ಪ್‌ಗೆ ಬಾತ್. ಒಳೆಗೆಂದ ಅವನ ಅಮ್ಮ "ಆತ್ಮೀ ತಿಂಡಿ ರೆಡಿ ಕೆಲ್ಸಕೆ ಹೋದ್ಲೆನ" ಕರಿವ ಸ್ವರ ಕೇಳ್ತ್. ಮನ್ಸ್‌ಲಿ ಹುಸಿನೆಗೆ ಬಂದ ಆತ್ಮೀಕ್ ಅಡ್ಗೆ ಕೋಣೆಗೆ ಸೇರ್ತ್.

* * * * * *

# ಕಥೆ ಆದ ಜೀವನ ಹೂವಾಗಿ ಅರ್ಲಿತ್ತ್

ಸಂಪಂಗಿಲಿ ನನ್ನ ಜೋಸ್ತಿ ಡಾಕ್ಟರ್. ನಾವು ಇಬ್ಬೊರ್ ಒಟ್ಟಿಗೆ ಪಿ.ಯು.ಸಿ. ಮುಗ್ಸಿದ. ನಾವು ಇಬ್ಬೊರ್ ಒಟ್ಟಿಗೆ ಎಂ.ಬಿ.ಬಿ.ಎಸ್ ಮಾಡೊಕುಂತ ಆಸೆಲಿ ಇದ್ದ. ಅಪ್ಪಂಗೆ ಬೇರೆ ಕಡೆ ವರ್ಗ ಆದರ್‌ಂದ ನಾ ಮೈಸೂರುಲಿ ಓದಿಕೆ ಸುರು ಮಾಡ್ದೆ. ಜೋಸ್ತಿ ಅಲ್ಲೇ ಓದಿ ಡಾಕ್ಟರ್ ಕೆಲ್ಸ ಸುರು ಮಾಡಿಕಂಡತ್ತ್. ಇಂದ್‌ಗೆ ನಾ ಅವನ ಕಾಣದೆ ಹದಿನೈದ್ ವರ್ಷ ಕಳ್ದ್ ಹೋತ್. ಏನೊ ನಮ್ಮ ಅದೃಷ್ಟಕೆ ಪೇಸ್ ಬುಕ್ಕ್‌ಲಿ ನಾವು ಇಬ್ಬೊರ್ ಸಿಕ್ಕಿದರ್‌ಂದ ಕಾಂಬಕೆ ಆತ್. ಮುಂದೆನ ತಿಂಗ ಕೆಲ್ಸದ ಮೇಲೆ ಸಂಪಂಗಿಗೆ ಬಾಕೆ ಉಟ್ಟುಂತ ಹೇಳ್ದೆ. ತಪ್ಪದೆ ಮನೆಗೆ ಬಂದ್ ನನ್ನ ಮಾತಾಡಿ ಹೋಗ್‌ಂತ ಹೇಳಿತ್ತ್.

ನಾ ಅದ್ಕೆ ಒಪ್ಪಿಕಂಡೆ ನನ್ನ ಊರ್‌ಂದ ಹೊರ್ಡುಕನ ಜೋಸ್ತಿನ ಮನೆಗೆ ಹೋಕುಂತ ತೀರ್ಮಾನ ಮಾಡ್ದೆ. ಸಂಪಂಗಿಗೆ ಎತ್ತುವ ಹಂಞ ಹೊತ್ತಿಗೆ ಮುಂದೆ ನಾ ಕುದ್ದ ಸೀಟ್ ಖಾಲಿ ಇತ್ತ್. ನಾ ಕಿಡ್ಕೆಂದ ಆಚೆ ಹೊರೆಗೆನ ಪೊರ್ಲುನ. ನೋಡಿಕಂಡ್ ಇದ್ರು. ಒಂದ್ ಹೆಂಗ್ಸ್ ಬಂದ್ ಇಲ್ಲಿ ಒಳನ?ಂತ ಕೇಳ್ತ್. ನಾ ತಿರ್‍ಗಿ ಅವಳ ನೋಡ್ದೆ. ತಿರ್‍ಗಿ ನೋಡಿರೆ ಪರಿಚಯದ ಮೋರೆನ ಹಂಗೆ ಕಂಡತ್ತ್. ಅವಳಿಗೆ ನನ್ನ ಗೊತ್ತಾಗಿರೊಕು. ಕೂಡ್ಲೆ ಮೋರೆಲಿ ಕುಸಿ ತೋರ್‍ಸಿ "ನಿವು ಹರೀಶ್ ಅಲಾ"ಂತ ಕೇಳ್ತ್ ಇನ್ನೂ ಗೊತ್ತಾತ್ಲೆನ ನಾ ಮೃದುಲಂತ ಹೇಳ್ತ್. ಮೃದುಲ ಮತ್ತೆ ನಾ ಇಬ್ಬೊರು ಪಿ.ಯು.ಸಿ.ನ ಒಟ್ಟಿಗೆ ಓದಿದ್,, ನಾನು ನನ್ನ ಜೋಸ್ತಿ ಕೂಡ ಅವಳ ಒಟ್ಟಿಗೆ ತುಂಬಾ ಆತ್ಮೀಯರಾಗಿದ್ದ. ನಾ ನನ್ನ ಜೋಸ್ತಿನ ಮನೆಗೆ ಹೋಗುವ ವಿಚಾರನ ಅವಳಿಗೆ ಹೇಳ್ದೆ.

## ಹೊಸ ಬೊದ್ಕು

"ಇಲ್ಲೆ ಇಂದ್ ನನ್ನ ಮನೆ ಕಡೆ ನೀ ಬಂದೇ ಬರೊಕು ಹಳೆ ಆತ್ಮೀತೆಯಲಿ ಒತ್ತಾಯ ಮಾಡ್ತ್. ಯಾವುದೋ ಕಥೆನ ಹೇಳಿಕೆ, ಆಸೆಲಿ ಇದ್ದವಳಾಂಗೆ ಕಂಡತ್. ನಾ ನನ್ನ ಜೋಸ್ತಿನ ಒಟ್ಟಿಗೆ ನನ್ನ ಜೀವನದ ಕಥೆಗಳ ಹೇಳಿಕೆ ಹೋಗ್ತ ಒಳೆ. ನೆಡುಲಿ ಮೃದುಲ ಸಿಕಿದರ್‌ಂದ ಇವಳ ಒಳ ಸ್ವರನ ಕೇಳಮಂತ ಅವಳ ಮನೆಗೆ ಹೋಕೆ ಒಪ್ಪಿಕಂಡೆ. ಮೃದುಲ ಅಂದ್ ಅವಳ ಮಾವನ ಮನೆಂದ ಕ್ಲಾಸ್‌ಗೆ ಬರ್ತಿತ್ತ್. ಈಗ ಕೂಡ ಅಲ್ಲೆ ಇರ್ದ್ದರ ನೋಡಿ ನಂಗೆ ಅಚ್ಚರಿ! ಆತ್. ಸುಮ್ಮನೆ ಅವಳ ಹಿಂದೆ ಮನೆ ಕಡೆ ಹೆಜ್ಜೆ ಹಾಕಿದೆ. ಅವಳ ಮನೆಗೆ ಹೊಗುವ ಎರಡ್ ಕಡೆಗಳಲ್ಲಿ ಕುಸಿ ಕೊಡುವ ಹೂವು, ಗಿಡಗ ಕೈ ಬೀಸಿ ಕರೆತ್ತಿದ್ದ, ಸುಯ್‌ಂ ಬೀಸುವ ಗಾಳಿ ತಲೆ ಬೊಗ್ಗಿಸಿ ನಿತ್ತ ಬಾಳೆ, ಚಾಳೆ, ಅದರ ನೆಡುಲಿ ನಡೆವ ಮೃದುಲನ ಪೊರ್ಲುನ ಅವಳಿಗೆ ಗೊತ್ತಾಗದಂಗೆ ನೊಡ್ಡೆ ಉದ್ದ ಜಡೆ, ಬೆನ್ನ್‌ನ ಮೇಲೆ ಆಚೆ–ಈಚೆ ಹೊಣ್‌ಂಕುವ ಪೊರ್ಲುನ ಅವಳಿಗೆ ಗೊತ್ತಾಗದಂಗೆ ನೋಡ್ತಿದ್ದೆ. ಹಂಞಾದಪ್ಪ ಆದರು ಅಂದ್‌ನ ಪೊರ್ಲು ಹಂಗೆನೆ ಇತ್ತ್. ಗೇಟ್ ತೆಗ್ದ್ ಬಾಗ್‌ಲ್ ಹಕ್ಕಲೆ ಹೋಗಿ ನಿತ್ತಿತ್ತ್. ಈಗ ನಂಗೆ ಹಂಞ ಹೆದ್ರಿಕೆ ಆತ್. ಗಂಡನ ವಿಷಯ ಕೇಳಿರೆ ಏನಾದ್ರ್ ತಪ್ಪು ಆದೆನಾ?ಂತ ಸುಮ್ಮನಿದ್ದೆ. ಅಷ್ಟೆಕೆ ಅವಳಿಗೆ ಮೊದ್ವೆ ಆಗುಟಾ, ಇಲ್ಲೆನಾಂತ ನಂಗೆ ಗೊತ್ತಿಲ್ಲೆ. ಶೂ ತೆಗ್ದ್ ಒಳೆಗೆ ಹೋಗಿ ಮೆತ್ತನೆ ಸೋಪಲಿ ಒರ್ಗಿ ಕುದ್ದೆ. ಸೀಲಿಂಗ್ ಪ್ಯಾನ್ ಹಾಕಿದ ಮೃದುಲ "ಜ್ಯೂಸ್ ತನ್ನೆ"ಂತ ಒಳೆಗೆ ಹೋಗಿತ್ತ್. ಎಲ್ಲಿಗೋ ಹೋಗುವ ನಾ ಎಲ್ಲಿಗೋ ಬಂದೆಂತ ಯೋಚನೆ ಮಾಡ್ದೆ. ಅಷ್ಟ್ ಹೊತ್ತಿಗೆ ಹರೀಶ್ ಜ್ಯೂಸ್‌ಂತ ಹೇಳ್‌ಕನ ಗಡಿ ಬಿಡಿಲಿ ಸರಿಯಾಗಿ ಕುದ್ದೆ. ನನ್ನ ಎದುರು ಕುದ್ದ ಮೃದುಲ, ನಮ್ಮ ಶಾಲೆನ ದಿನಗಳ ನೆನ್ಪ್ ಮಾಡಿಕಂಡ್, ಆ ಮೇಲೆ ಅವಳ ಜೀವನದ ಕಥೆಗಳ ಹೇಳಿಕೆ ಸುರು ಮಾಡ್ತ್.

"ನನ್ನ ಜಿವನವೆ ಕೆಟ್ಟದಾಗಿ ಹೋತ್ ಹರೀಶ್ ಡಾ। ಶಶಾಂಕನ ಪ್ರೀತಿಸಿ ಮೊದ್ವೆ ಆದೆ. ನಮ್ಮ ಜೀವನ ಲಾಯ್ಕಲಿ ನಡೆತ್ತಿತ್ತ್. ನಾವ್ಗೆ ಇಬ್ಬೊರಿಗೂ ಕೆಲ್ಸ ಇದ್ದ ಕಾರಣ ಕೂಸುನ ಕಾಣುವ ಕನ್ಸ್‌ಂದ ಹಂಜ ದೂರ ಆಗಿದ್ದ. ಹಂಞಊ ಸಮಯ ಶಶಾಂಕ್‌ಗೆ ಆಯಾಸ, ಉಬ್ಬಸ, ಕೆಮುಲು, ಜರ, ತುಂಬ ಜೋರ್ ಆತ್. ಆಸ್ಪತ್ರೆಗೆ ಹೋಗಿ ಪರೀಕ್ಷೆ ಮಾಡ್ಸಿಕನ ಅರ್ಬ್ಸಿನ ಕಾಯಿಲೆ ಆಗಿ ತುಂಬಾ ಜೋರ್ ಆಗಿತ್ತ್. ಬೇಕಾದಷ್ಟ್ ಮೊದ್ದು ಮಾಡ್ಸಿದ ಅವರ ಜೀವನ ಉಳ್ಸಿಕಂಬಕೆ ಆತ್ಲೆ. ಆಸ್ಪತ್ರೆಲಿ ಅವರ ಆರೈಕೆನ ಒಟ್ಟಿಗೆ ನನ್ನ ಆರೈಕೆ ಕಳ್ತ್. ಶಶಾಂಕ್ ಆಸ್ಪತ್ರೆಲಿ ಇದ್ದರು ಅವರ ಮಾತ್ ನೆಗೆ, ಲಾಯ್ಕಾಗಿ ಇತ್ತ್. ನಮ್ಮ ಕೂಸುನ ನೋಡಿಕೆ ತುಂಬಾ ಆಸೆ ಕಣ್ಣ್‌ಂದ ಕಾದ್ ಕಂಡ ಇದ್ದ. ನಂಗೆ ಒಂಭತ್ತ್ ತಿಂಗ ತುಂಬಿ ಹೆರಿಗೆ ದಿನದಂದ್ ಶಶಾಂಕ್‌ನ ಜೀವ ಹೊರ್ಟ್ ಹೋಗಿತ್ತ್." ಒಂದ್ ಬುಡದೆ ಹೇಳ್ತ್ ಮೃದುಲ. ನಂಗೆ ಶಾಕ್ ಆಗಿ ಮಾತ್ ಹೊರೆಗೆ ಬಾಕೆ ನಿಮಿಷನೆ ಬೇಕಾಗಿತ್ತ್.

ದೇವ್ರು ಈ ತರ ವಿಧಿನ ಒಟ್ಟಿಗೆ ಆಟ ಆಡ್ಸಿದೆನ!ಂತ ನೆನ್ಸಿದೆ "ಜನ್ಮ ಕೊಟ್ಟ ಕೊಸುಗೆ ಧರಣಿಂತ ಹೆಸ್‌ರ್ ಇಸಿದೆ. ಅವಳ್ ಈಗ ಅಜ್ಜಿ ಮನೆಲಿ ಉಟ್ಟು. ಈಗ ಅವಳಿಗೆ ಐದ್

ವರ್ಷಂತ ಮೃದುಲ ಹೇಳ್ತ್. ಮತ್ತೆ ಆ ಊರುನ ಬುಟ್ಟ್ ನನ್ನ ಹಳೆ ಸಂಪಂಗಿಗೆ ಬಂದೆ. ಈ ಕಥೆನ ನಿನ್ನ ಒಟ್ಟಿಗೆ ಹೇಳಿ ಮನ್ಸ್‌ನ ಹಗುರ ಮಾಡಿಕಣಕುತ ಆತ್. ನಿನ್ನ ಹೊತ್ತುನ ಹಾಳ್ ಮಾಡಿರೆ ನನ್ನ ಕ್ಷಮಿಸ್. ಇದ್ ನನ್ನ ಜೀವನ ಸಾಲ್ ಬೊದ್ಕು ಇಲ್ಲದೆ ಒದ್ದಾಡ್ತ ಒಳೆ. ನಿನ್ನದೆಂತ ಕಥೆ? ನೀ ತುಂಬಾ ಪಾಪದ ಮೋರೆಲಿ ಒಳ. ನಿನ್ನ ಸಂಸಾರ ಹೆಂಗೆ ಉಟ್ಟು?" ತುಟಿ ಸೆರೆಲಿ ಸಣ್ಣ ನೆಗೆ ಮಾಯ ಆತ್. ಅದ್ ಅವಳಿಗೆ ಗೊತ್ತಾತ್ಲೆ. ಯಾಕೆಂತ ಹೇಳಿರೆ ನಾನು, ಮೃದುಲನು ಕಂಬಿಲಿ ಹೋಗುವ ರೈಲು. ನಾ ಹೆಚ್ಚೇನ್ ಹೇಳ್ದುಲೆ ಮೃದುಲ. ಅತ್ತೆ ಮಗಳ ಮೊದ್ವೆ ಆದೆ. ವರ್ಷ ಆಕನ ಜೀಪು ಗುದ್ದಿದ ರಭಸಲಿ ನನ್ನಂದ ದೂರ ಆತ್. ನಂಗು ಎರಡ್ ವರ್ಷದ ಹೆಣ್ಣ್ ಕೂಸು ಉಟ್ಟು ಅಕ್ಕನ ಮನೆಲಿ ಬೆಳ್ದದೆಂತ ಹೇಳ್ದೆ.

ಮೃದುಲಂಗೆ ಆದ ಬೇನೆನ ನಾ ತಿಳ್ಕಂಡೆ. ನನ್ನ ದೋಸ್ತಿನ ಮನೆಗೆ ಹೋಗಿ ಅವನೊಟ್ಟಿಗೆ ನನ್ನ ಕತೆನ ಹೇಳಿ ನನ್ನ ಮನ್ಸ್‌ನ ಹಗುರ ಮಾಡಿಕಣಕುತ ಹೊರ್ಟಿದ್ದೆ. ಆದರೆ ಇದ್ ಒಂದ್ ವಿಧಿ ವಿಲಾಸ, ನಿನ್ನ ನೋಡಿ ನಿನ್ನ ಕಥೆನ ಕೇಳುವಾಂಗೆ ಆತ್‌ಂತ ಹೇಳ್ದೆ. ಹಂಗೆ ನನ್ನ ವಾಚ್ ನೋಡ್ದೆ. ಜೋಸ್ತಿನ ಮನೆ ನೆನ್ಪಾತ್ ಅವನ ಕಂಡ್ ನನ್ನ ಮುಂದೆನ ಭವಿಷ್ಯನ ಅವನ ಒಟ್ಟಿಗೆ ಚರ್ಚೆ ಮಾಡಿಕೆಂತ ನಿರ್ಧಾರ ಮಾಡಿ ಹೊರ್ಟೆ. ಮೃದುಲನ ಮತ್ತೆ ಬಂದ್ ನೋಡ್ನೆಂತ ಹೇಳಿ ಹೊರ್ಟೆ. ಅವಳಿಗೆ ಅಚ್ಚರಿ! ಆತ್! ಅಂದರೆ ಅವನ ನಿರ್ಧಾರ ಶಾಶ್ವಾತ ಆಗಿರುವ ಹಂಗೆ ಆಗಿತ್ತ್.

* * * * * *

# ಜೀವನಂತ ಹೇಳಿರೆ ಹಿಂಗೆನೆ

ಕರೆಂಟ್ ಕೈ ಕೊಟ್ಟಿತ್. ಕಾವೇರಿಗೆ ಅಂದ್ ಕಡೆ ದಿನದ ಪರೀಕ್ಷೆ ಆಗಿತ್ತ್. ಹೊರೆಗೆನ ಮೊಗಸಾಲೆಲಿ ಸೀಮೆಣ್ಣೆ ದೀಪದ ಮಂದ ಬೊಳ್ಪುಲಿ ಓದಿಕಂಡ್ ಕುದ್ದಿತ್ತ್. ಅಪ್ಪ, ಅಮ್ಮ ಮಲ್ಗಿದ. ಯಾರೋ ಆಂಜಿದಾಂಗೆ ಆಗಿತ್ತ್ ಕಾವೇರಿಗೆ. ಹಂಞ ಹೊತ್ತ್‌ಲಿ ಸಣ್ಣ ಸ್ವರಲಿ ಕಾವೇರಿ, ಕಾವೇರಿ ಕರ್ದ ಹಾಂಗೆ ಅವಳ ಕೆಬಿಗೆ ಕೇಳ್ತಿತ್ತ್.

'ಅರೆ ಯಾರಾಗಿರ್ದು! ಈ ಹೊತ್‌ಲಿ' ಯೋಚ್ನೆ ಮಾಡ್ತ್ ಕಾವೇರಿ. ನಿಲ್ಕಿ ನೋಡ್ದ ಹೊತ್ತ್‌ಲಿ ಅವಳಿಗೆ ಕಂಡದ್ದ್ ಅವಳ ಭಾವ, ಸೋದರ ಮಾವನ ಮಂಜ ಜಗದೀಶ. ಜಗದೀಶಂಗೆ ಕಾವೇರಿ ಮತ್ತೆ ವಿಶಾಲ್‌ನ ಪ್ರೇಮಕಥೆ ಗೊತ್ತಿತ್ತ್. 'ನಂಗೆ ಹಂಞ ಕೆಲ್ಸ ಇತ್ತ್. ಕೆಲ್ಸ ಮುಗ್ಸಿ ಬಾಕನ ಹೊತ್ತಾತ್. ಅದ್ಕೆ ನಿನ್ನ ಮಾತಾಡ್ಸಿ ಪೋಯಿಂತ ಬಂದೆ'. ಕಾವೇರಿಗೆ ಅವನ ಬುದ್ಧಿ ಮುಂದೆಂದಲೇ ಗೊತ್ತಿತ್ತ್. ಅವ ನೋಡುವ ವಾರೆ ನೋಟ. ಅಂವ ಮಾಡುವ ನಾಟಕನ ತಿಳ್ದ ಕಾವೇರಿಗೆ ಇವನ ಮೇಲೆ ಹೆದ್ರಿಕೆ 'ಕಾವೇರಿ–ವಿಶಾಲ್‌ನ ಅಪ್ಪಂಗೆ ಬೇರೆ ಕಡೆ ವರ್ಗ ಆತ್ ಇನ್ನ್ ವಿಶಾಲ್ ಅವನ ಊರುಲಿ ಇರ್ದುಲೆ ಅದ್ಕೆ ಅವನ ಬಗ್ಗೆ ನಿಂಗೆ ತಿಳ್ಸಿನೆಂತ ಬಂದೆ.' ಅವನ ಕೈಲಿ ಇದ್ದ ಕಾಗದನ ಅವಳ ಕೈಗೆ ಕೊಟ್ಟತ್.' ನಿಜ ನಂಬಿತ್ ಕಾವೇರಿ. ಕಾವೇರಿ ನಾ ತುಂಬಾ ಕಷ್ಟಲಿ ಒಳೆ. ನಂಗೆ ಹಂಞ ದುಡ್ಡ್ ಬೇಕು. ನಿ ಕೊಡದೆ ಇದ್ದರೆ ಇನ್ನಿದ್ದ ಕಾಗದಗಳ ನಿನ್ನ ಅಪ್ಪನ ಕೈಲಿ ಕೊಟ್ಟನೆ. ನಂಗೆ ದುಡ್ಡ್‌ನ ಅಗತ್ಯ ಏನ್ ಮಾಡಿಯ? ಅವಳ ಕೈಕಾಲ್ ನಡ್ಗಿಕೆ ಸುರು ಆತ್. ಅಪ್ಪನ ಒಟ್ಟಿಗೆ ಹೇಳಿರೆ ನನ್ನ ಹೊರಗೆ ಹಾಕುದು ಗ್ಯಾರಂಟಿಂತ ಅವಳ ಮನ್ಸಿಗಾತ್.

## ಹೊಸ ಬೊದ್ಕು

'ದಮ್ಮಯ್ಯ ಯಾರಿಗು ಹೇಳ್ಬಡ ಹೆಂಗಾದ್ರ್ ಮಾಡಿ ಕೊಟ್ಟನೆಂತ' ಒಪ್ಪಿಕಂಡಿತ್ ಕಾವೇರಿ.

ಸೀದಾ ಅವಳ ಕೋಣೆಗೆ ಹೋಗಿ ಕೈಲಿ ಇದ್ದ ಕಾಗದ ಒಡ್ದ್ ಓದಿತ್. 'ಪ್ರೀತಿಯ ಕಾವೇರಿ ನನ್ನ ಅಪ್ಪಂಗೆ ಬೇರೆ ಕಡೆ ವರ್ಗ ಆದರ್‌ಂದ ನಿನ್ನ ಒಟ್ಟಿಗೆ ಇರಿಕೆ ಆಗ್ಲೆ ಅದರ್‌ಂದಾಗಿ ನನ್ನೊಟ್ಟಿಗಿದ್ದ ಪ್ರೀತಿನ ಮರ್ತ್ ಬುಡು. ನನ್ನಂದ ಒಳ್ಳೆ ಹೈದ ನಿನ್ನ ಬಾವ ಜಗದೀಶ ಅವನ ಮೊದ್ವೆ ಆಗಿ ಸುಖಲಿ ಇರ್ ನಿನ್ನ ಪ್ರೀತಿನ ಜೋಸ್ತಿ ವಿಶಾಲ್'ಂತ ಬರ್ದಿತ್ತ್ ಕಾಗದ ಓದಿದ ಕಾವೇರಿಗೆ ಆಕಾಶನೆ ತಲೆ ಮೇಲೆ ಬಿದ್ದ ಅನುಭವ ಆತ್. ಆಳಗೇ ಅವಳ ಫೋನ್‌ಲಿ ಇದ್ದ ನಂಬರ್‌ನ ತೆಗ್ದ್ ಹಾಕಿತ್. ಆದರೆ ಅದ್ ವಿಶಾಲ್‌ನ ಕಾಗದ ಆಗಿತ್ಲೆ. ಜಗದೀಶನ ಕುತಂತ್ರ ಆಗಿತ್ತ್.

ಕಾವೇರಿಗೆ ಏನ್ ಮಾಡೊಕುಂತ ಗೊತ್ತಾಗದೆ ಕಣ್ಣೀರ್‌ನ ಮಳೆ ಹರ್ಸಿತ್. ಮಗಳಿಗೆ ಮೊದ್ವೆ ಆಗುವ ಪ್ರಾಯ ಆಕನ ಮೊದ್ವೆ ಮಾಡ್ಸುವ ಆಸೆಲಿ ಮಗಳಿಗೆ ವಿಷಯ ತಿಳ್ಸಿದ. ಒಪ್ಪಿಕಂಡಿತ್ತ್ ಕಾವೇರಿ. ಊರಿಗೆ ಪೊರ್ಲುನ ಗೂಡೆ ಕಾವೇರಿ ಅವಳ ಪೊರ್ಲು ಜಗದೀಶನ ಹುಚ್ಚನಾಂಗೆ ಮಾಡಿತ್. ಮೊದ್ವೆ ಮಾಡ್ಸಿಕೊಡಿಕೆ ಒತ್ತಾಯ ಆಗಿತ್ ಜಗದೀಶಂದ್.

ಹಳೆ ಸಂಬಂಧ, ಕೆಟ್ಟ ಮನ್ಸ್‌ನ ಜಗದೀಶಂತ ಗೊತ್ತಾದ ಮೇಲೆ ಅವನ ಬಲೆಗೆ ಬೀಳಿಕಿಲೆ'ಂತ ಹಠ ಹಿಡ್ದ್ ಕುದ್ದಿತ್. ಒಂದ್ ದಿನ ಜಗದೀಶ ಕಾವೇರಿನ ಮನೆಗೆ ಬಂದಿತ್ತ್. ಅಂದ್ ಅವಳ ಅಪ್ಪ, ಅಮ್ಮ ಅವರ ಸಂಬಂಧಿಕರ ಮನೆಗೆ ಮೊದ್ವೆಗೆ ಹೋಗಿದ್ದ. ಕಾವೇರಿ ಒಬ್ಬಳೆ ಮನೆಲಿತ್ತ್.

ಚಾ ಮಾಡಿಕೆ ಅಡ್ಗೆ ಕೋಣೆಗೆ ಕಾವೇರಿನ ಹಿಂದೆಂದ ಜಗದೀಶನು ಹೋತ್. 'ನೀವು ಹೊರಗೆ ಹೋಗಿ ಕುದ್ರಿ' ಜಗದೀಶ ಮಾತಾಡದೆ ಹೊರಗೆನ ಮೊಗಸಾಲೆಗೆ ಹೋಗಿ ಕುದ್ದಿತ್. ಐದ್ ನಿಮಿಷಲಿ ಚಾ ಮಾಡಿಕಂಡ್ ಎರಡ್ ಗ್ಲಾಸ್ ಚಾ ಅವನ ಮುಂದೆ ಇಸಿ ಕಾವೇರಿ ಕೂಡ ಅಲ್ಲೆ ಕುದ್ದಿತ್. ಇವಳ ಬಲೆಗೆ ಬೀಳ್ಸುವ ಉಪಾಯ ಮಾಡಿಕಂಡ್ ಬಂದ ಜಗದೀಶ 'ಚಾಯ ಚಪ್ಪೆ ಸಕ್ಕರೆ ಎತ್ತಿತ್ಲೆ' ಅವಳ ಕೈಲಿ ಇದ್ದ ಗ್ಲಾಸ್‌ನ ಅಲ್ಲೆ ಇಸಿ ಸಕ್ಕರೆ ತಾಕೆ ಅಡ್ಗೆ ಕೊಣೆಗೆ ಹೋಗಿತ್ತ್. ಉಪಯಗಾರ ಜಗದೀಶ ಅವನ ಜೋಬುಲಿ ಇದ್ದ ಮಾತ್ರೆನ ಅವಳ ಗ್ಲಾಸ್‌ಗೆ ಹಾಕಿತ್. ಅವಳಿಗೆ ಗೊತ್ತಾತ್ಲೆ. ಚಾ ಕುಡ್ದ ಕಾವೇರಿಗೆ ಮಂಕ್ ಹಿಡ್ತ್. ಜಗದೀಶ ಏನೂ ಗೊತ್ತಿಲ್ಲದವರಾಂಗೆ 'ಕಾವೇರಿ, ಕಾವೇರಿ ಏವಾತ್ ನಿಂಗೆ' ಅವಳ ಕೈ ಹಿಡ್ದ್ ಅವಳ ಕೋಣೆಗೆ ಕರ್ಕಂಡ್ ಹೋಗಿ ಮಲ್ಗಿಸಿತ್. ಕಾವೇರಿಗೆ ಸೊಯ ತಪ್ಪಿ ಹೋಗಿ ಮಾತ್ ಬರದಾಂಗೆ ಆಗಿತ್ತ್. ಜಗದೀಶ ಅವನ ಕಾಮದ ಆಸೆನ ತೀರ್ಸಿಕಂಡ್ ಅಲ್ಲದವರಾಂಗೆ ಅವನ ಮನೆ ಕಡೆ ಹೊರ್ಟತ್. ಮೊದ್ವೆ ತೀರ್ಸಿ ಮನೆಗೆ ಬಂದ ಅಪ್ಪ, ಅಮ್ಮಂಗೆ ಮಗಳ ಅವಸ್ಥೆ ನೋಡಿ ಹೆದ್ರಿ ಡಾಕ್ಟರ್ ಹಕ್ಕಲೆ ಕರ್ಕಂಡ್ ಹೋದ. ಅಪ್ಪೆ, ಅಮ್ಮಂಗೆ ಮಗಳ ಮೇಲೆ ಯಾವ ಸಂಶಯ ಬರದಾಂಗೆ ದೈರ್ಯ ಹೇಳ್ದ ಡಾಕ್ಟರ್.

ಮಾರನೆ ದಿನ ಊರ್ ಇಡೀ ಮಗಳ ಬಗ್ಗೆ ಕೆಟ್ಟ ಮಾತ್‌ಗಳ ಕೇಳುವಾಂಗೆ ಆದರು ಅದರೆಲ್ಲ ತಲೆಗೆ ಹಾಕಣದೆ ಮಗಳ ಮೇಲೆ ನಂಬಿಕೆ ಇಸಿ ದೈರ್ಯಲಿದ್ದ.

## ಹೊಸ ಬೊದ್ಕು

ಎರಡ್ ಮೂರು ತಿಂಗ ಕಳ್ದ್ರು ಕಾವೇರಿ ಕಾಲೇಜ್‌ಗೆ ಹೋಗದೆ ಮನೆಲಿ ಇತ್ತ್. ವಿಶಾಲ್ ಕಾವೇರಿಗಾಗಿ ಹುಡ್ಕ್‌ತಿತ್ತ್. ಅವನ ಕಣ್ಣ್‌ಗೆ ಬೀಳದೆ ಕಾವೇರಿನ ಮನೆಗೆ ಹೋಗಿತ್ತ್ ವಿಶಾಲ್. ಈಗ ಅವಳಿಗೆ ಅಚ್ಚರಿ! ಆತ್ ಕಾವೇರಿ, ವಿಶಾಲ್‌ನ ಪ್ರೀತಿ ಬಗ್ಗೆ ಅವಳ ಮನೆಲಿ ಹೇಳಿತ್ಲೆ. ವಿಶಾಲ್‌ನ ಮನೆಸ್ಥಾನ ಸಣ್ಣದಾಗಿತ್ತ್. ಈಗ ಇವರ ವಿಚಾರ ಇವ್ಕೆ ಗೊತ್ತಾತ್ತ್. ವಿಶಾಲ್‌ಗೆ ಮೊದ್ವೆ ಮಾಡ್ಸಿದ. ಮೊದ್ವೆ ಆದ ಸುರುನ ದಿನಲಿ ಕಾವೇರಿನ ಒಟ್ಟಿಗೆ ವಿಶಾಲ್ ಹೇಳಿತ್ 'ನಾ ನಿನ್ನ ತುಂಬಾ ಪ್ರೀತಿಸಿನೆ. ಅದೇ ತರಲಿ ನನ್ನ ಅಮ್ಮನ ನೀನು ಪ್ರೀತಿಸೊಕು. ಅವರ ಮಾತ್‌ಗೆ ಗೌರವ ಕೊಟ್ಟ್ ಮನ್ಸ್‌ಗೆ ಬೇನೆ ಆಗದ ರೀತಿಲಿ ನಡ್ಕ್‌ಂಡ್ ಇರೊಕು. ಅವ್ಕೆ ಹಂಞ ಸಿಟ್ಟ್ ಜಾಸ್ತಿ. ನನ್ನ ಅಮ್ಮ ನನ್ನ ಸಾಂಕಿಕೆ, ವಿದ್ಯೆ ಕಲ್ಸಿಕೆ ಬೇಕಾದಷ್ಟ್ ಕಷ್ಟ ಪಟ್ಟಳ. ನಾ ಸಣ್ಣದಿರ್‌ಕನ ನನ್ನ ಅಪ್ಪ ತೀರಿ ಹೋಗಿದ್ದ. ನಿನ್ನ ಮನೇಲಿ ನಿನ್ನ ಹೆಂಗೆ ಬೆಳ್ಸಿದ ಹಂಗೆ ನನ್ನ ಅಮ್ಮ ಬೆಳ್ಸಿದ' ಬುದ್ಧಿವಾದ ಹೇಳಿತ್ ವಿಶಾಲ್. ಕಾವೇರಿನ ಮನ್ಸ್ ಒಳಗೆ ನಡ್ಗಿಕೆ ಸುರು ಆತ್.

ಅಂದ್ ಸುರುನ ದಿನಲಿ ಎಲ್ಲ ಕೆಲ್ಸಗಳ ಕಾವೇರಿನ ಕೈಲಿ ಮಾಡ್ಸಿದ ಅವಳತ್ತೆ. ಕಾವೇರಿ ಅವಳ ಅಪ್ಪ, ಅಮ್ಮಂಗೆ ಮಂಜಣೆನ ಮಗಳಾಗಿತ್ತ್. ಯಾವ ಕೆಲ್ಸ ಕೂಡ ಅವಳಿಗೆ ಗೊತ್ತಿತ್ಲೆ. ಗಂಡನ ಮನೆಲಿ ಎಲ್ಲ ಕೆಲ್ಸಗ ಅವಳ ಪಾರಕಾಯೆತಿತ್ತ್. ಅವಳ ಮನ್ಸ್‌ಗೆ ಅಷ್ಟ್‌ಂದ್ ಸಮದಾನ ಇತ್ಲೆ. ಮನೆಲಿ ದುಡಿವ ಹಂಗ್, ಇನ್ನೊಂದ್ ಕಡೆಂದ ನೀಚ ಜಗದೀಶ ಮಾಡ್ದ ಕೆಲ್ಸ, ಇದೆಲ್ಲ ಎಲ್ಲಿ ಗಂಡಂಗೆ, ಅತ್ತೆಗೆ ಗೊತ್ತಾದೆಂತ ಹೆದ್ರಿಕೆ. ಯಾಗೊಳ್ ಕೆಲ್ಸ ಗೊತ್ಲೆಂತ ಅತ್ತೆ ಕೈಲಿ ಸಿಕ್ಕುವ ಬೈಗಳ್ ಇದೆಲ್ಲ ನೆನ್ಪ್‌ಗೆ ಬಂದರೆ, ಕೋಣೆಗೆ ಹುಕ್ಕ್ ಹೊರಗೆನೆ ಬರ್ತಿತ್ಲೆ. ವಿಶಾಲ್‌ಗೂ ಬೇಜಾರ್ 'ಪಾಪ ಇದ್ಕೆ ಯಾವ ಕೆಲ್ಸ ಗೊತ್ಲೆ, ಅಮ್ಮನ ಬೈಗಳ್ ತಿಂದ್ ಬೇಜಾರ್ ಮಾಡ್ದೆ, ಹೆಣ್ಣ್‌ನ ಕಡೆಂದ ಮಾತಾಡ್ರೆ ಅಮ್ಮಂಗೆ ಆದ್ಲೆ. ಅಮ್ಮನ ಕಡೆಂದ ಮಾತಾಡ್ರೆ ಹೆಣ್ಣ್‌ಗಾದ್ಲೆ' ವಿಶಾಲ್ ಅವಳ ಊರ್ ಸುತ್ತಿಕೆ ಕರ್ಕ್‌ಂಡ್ ಹೋದೆ. ಎಲ್ಲಿ ಹೋದರು ಕಾವೇರಿಗೆ ಅವಳ ಜೀವನಲಿ ನಡ್ದ್ ಘಟನೆಗಳೆ ನೆನ್ಪ್ ಆಗ್ತಿತ್ತ್.

ಒಮ್ಮೊಮ್ಮೆ 'ಗಂಡನ ಒಟ್ಟಿಗೆ ಹೇಳಿರೆ ಏನ್ ಆದು? ಹೇಳಿರೆ ನನ್ನ ಗತಿ ಏನಾದು? ನನ್ನ ಮನೆಂದ ಹೊರಗೆ ಹಾಕುವನ? ಹಿಂಗೆ ಒಂದರ ಹಿಂದೆ ಒಂದು ಪ್ರಶ್ನೆಗ ಹುಟ್ಟಿಕಣ್‌ತ್ತಿತ್ತ್. ಮತ್ತೆ ಮನೆಗೆ ಬಾಕನ ಅದೆ ನೆನ್ಪ್. 'ಹಿಂಗೆ ಯಾಕೆ ಬೇಜಾರ್ ಇವಳಿಗೆ?' ಅವಳ ಮೋರೆ ನೋಡ್ದ ಅವಳ ಅತ್ತೆಗೆ ಏನೋ ಸಂಶಯ. 'ಯಾಕೆ ಕಾವೇರಿ ನೀ ಯಾಗೋಳು ಬೇಜಾರ್ ಮಾಡಿಕಂಡಿಯ? ನನ್ನಂದ ನಿಂಗೆ ಏನಾದರ್ ತೊಂದರೆ ಆತಾ? ನನ್ನ ಒಟ್ಟಿಗೆ ಹೇಳ್' ಕಾವೇರಿಗೆ ಹೇಳಿಕೆ ಹೆದ್ರಿಕೆ ಗಂಡ, ಮತ್ತೆ ಅತ್ತೆ ನನ್ನ ದೂರ ಮಾಡುವೆಂತ. ಆಗಳೇ ಅವಳ ಅತ್ತೆಗೆ ಜಗದೀಶ ಕೆಟ್ಟ ಕೆಟ್ಟದಾಗಿ ಫೋನ್ ಮಾಡಿ ಹೇಳಿತ್ತ್. ಕಾವೇರಿನ ಬಾಯಿಲಿ ಸತ್ಯ ಬರ್ಲಿಂತ ಅವರ ಆಲೋಚನೆ ಆಗಿತ್ತ್.

ಶನಿ ಹಿಡ್ದವ ಅಂದೇ ಕಾವೇರಿಗೆ ಫೋನ್ ಮಾಡ್ತ್ ಕಾವೇರಿ ನಂಗೆ ದುಡ್ಡ್ ಬೇಕು.

ಕೊಡದಿದ್ದರೆ ನಿನ್ನ ಅತ್ತೆಗೆ ಹೇಳ್ನೆಂತ ಹೇದ್ರಿಸಿತ್.

'ನೀ ಒಬ್ಬ ಗಂಡ್‌ಸ್, ಸೋದರದವ, ನಿನ್ನ ಒಳ್ಳ ಜನಂತ ತಿಳ್ಕಂಡಿದೆ ಸೋದರದ ಮಾರ್ಯಾದೆ ನಿಂಗೆ ಇಲ್ಲೆ ಇನ್ನೇಷ್ಟ್ ಹೆಣ್ಮ್ಕಳ ಹಾಳ್ ಮಾಡಿಯ? ನಿನ್ನಂತವುಕೆ ಎಲ್ಲ ಹೆಣ್ಣ್‌ಮಕ್ಕ ಒಗ್ಗಟಾಗಿದ್ದರೆ ಏನೂ ಮಾಡಿಕೆ ಸಾಧ್ಯ ಇಲ್ಲೆ. ಮರ್ಯಾದೆಲಿ ಫೋನ್ ಕಟ್ಟ್ ಮಾಡ್. ನಿನ್ನಂತ ನೀಚಂಗೆ ಹೆದ್ರುವ ಮಗ ನಾ ಅಲ್ಲ' ಏನ್ ಬೇಕಾರ್ ಆಗಲಿಂತ ಧೈರ್ಯ ಮಾಡಿ ಹೇಳ್ತ್. ಅವನ ಉಸ್ಸ್ಕ ಡಮ್ ಇಲ್ಲದೆ ಫೋನ್ ಕಟ್ಟ್ ಮಾಡ್ತ್ ಜಗದೀಶ.

ಕೋಣೆಲಿ ಹೋಗಿ ಕುದ್ದ ಕಾವೇರಿಗೆ 'ಛೇ ನಂಗೆ ಇನ್ನೆಷ್ಟ್ ತೊಂದರೆ ಕೊಟ್ಟದೆನಾ, ಒಮ್ಮೆ ಬೇಗ ಸತ್ತಾರ್ ಹೋದರೆ ಸಾಕಾಯ್ತ್'ಂತ ಮನ್ಸ್‌ಲಿ ಹೇಳ್ತಿತ್ತ್.

ಅವಳ ಕಷ್ಟನ ಅರ್ಥ ಮಾಡಿಕಂಡ ಅವಳ ಅತ್ತೆ ಒಂದ್ ವಿಷಯ ಕೇಳ್ನೆ ನಿಜ ಹೇಳ್'ಂತ ಹೇಳ್ದ್.

ಕಾವೇರಿಗೆ ಸಿಡ್ಲ್ ಮಿಂಚಿದಾಂಗೆ ಆತ್.

'ಜಗದೀಶ ಹೇಳ್ದ ವಿಷಯ ಹೌದಾ?' ಕಾವೇರಿಗೆ ಬಾಯಿ ಬುಟ್ಟ್ ಹೇಳಿಕೆ ಆಗದೆ ಕಣ್ಣ್‌ಲಿ ನೀರ್ ಅರ್ಸಿತ್. 'ನಿಜ ಹೇಳ್' ಕಾವೇರಿನ ಗಲ್ಲ ಮುಟ್ಟಿ ಕೇಳ್ದ್.

'ನೀವ್ಗೆ ಹೆಂಗೆ ಗೊತ್ತಾದ್' "ಇದ್ ನಿನ್ನ ಉತ್ತರ ಅಲ್ಲ" ಮೊನ್ನೆ ನೀ ತೌವ್ರು ಮನೆಗೆ ಹೋಕನ ನಂಗೆ ಫೋನ್ ಮಾಡಿ ಹೇಳ್ತ್' ಕಾವೇರಿಗೆ ಅತ್ತೆನ ಎದ್‌ರ್ ನಿಲ್ಲಿಕೆ ಧೈರ್ಯ ಬಾತ್ಲೆ' ಛೇ ಇಷ್ಟ್ ಕೇಳ್‌ಕನ ಇನ್ನ್ ಅಂಡ್ಗಿಸಿ ಪ್ರಯೋಜನ ಇಲ್ಲೆ'ಂತ ಧೈರ್ಯ ಮಾಡಿ ನಡ್ದ ವಿಷಯ ತಿಳ್ಸಿತ್ ಕಾವೇರಿ.

'ಕಾವೇರಿ ನೀ ನಿನ್ನ ಗಂಡನ ಒಟ್ಟಿಗೆ ಲಾಯ್ಕಲಿ ಇರ್. ಇನ್ನ್ ಅವನ ಕೆಬಿಗೆ ಬೀಳದ ಹಾಂಗೆ ಇರ್ಲಿ. ನಡ್ದ್‌ದ್ ನಡ್ದ್ ಹೋತ್ ಅವ ನಿನ್ನ ಮೈ ಮುಟ್ಟಿರು ನಿನ್ನ ಮನ್ಸ್‌ನ ಅಲ್ಲ. ಅವನ ಒಂದ್ ದಿನದ ಕಾಮದ ಆಸೆ ಅಷ್ಟೆ ಹಿಂಗೆ ಮಾಡ್ರೆ ನಿನ್ನ ಮೊದ್ವೆ ಆಕೆ ಯಾರು ಒಪ್ಪಿಕಿಲೆ. ನನ್ನನ್ನೆ ಮೊದ್ವೆ ಆದು ಅಂತ ಭಾವನೆಲಿ ಕೆಟ್ಟ ಕೆಲ್ಸಕೆ ಕೈ ಹಾಕಿದ್. ಮನ್ಸ್‌ಗೆ ಧೈರ್ಯ ತಕ'

'ನಾ ನಿಮ್ಮ ತಪ್ಪಾಗಿ ತಿಳ್ಕಂಡೆ ಅಮ್ಮ. ನೀವು ವಿಶಾಲ್‌ಗೆ ಈ ವಿಷಯ ಹೇಳಿ ನನ್ನ ಹೊರಕೆ ಹಾಕಿರೆಂತ ನೆನ್ಸಿ ನಿಮ್ಮೊಟ್ಟಿಗೆ ಬಾಯಿ ಬುಟ್ಟತ್ಲೆ. ಇಂದ್‌ಂದ ನೀವು ನನ್ನ ಅಮ್ಮನಾಂಗೆ ಕಂಡರಿ' ಅತ್ತೆನ ಕಾಲ್ ಹಿಡ್ದ್ ಮರ್ಬ್ಟತ್ ಕಾವೇರಿ. ಅವಳಿಗೆ ಸಮಧಾನ ಹೇಳಿ ನನ್ನ ನೀ ಅಮ್ಮಂತ ಹೇಳ್ದ ಇನ್ನ್ ಮುಂದೆ ನನ್ನ ಮಗಳ ಹಂಗೆ ನೋಡ್ನೆಂತ ಅವಳ ಬೆನ್ನ್ ತಟ್ಟಿದ ಅಂದ್‌ಂದ ಕಾವೇರಿಗೆ ಹೊಸ ಜೀವ ಬಾತ್. ಗಂಡ, ಅತ್ತೆನ ಒಟ್ಟಿಗೆ ಪೊರಲ್ಲಿಲಿ ಜೀವನ ನಡ್ಸಿತ್.

* * * * * *

# ರಾಧ

ಪರುಶುರಾಮ ನೀಲಾ ಅವರ ಪೊರ್ಲುನ ಮಗಳ್ ರಾಧ. ಬಡತನದ ಬೊದ್ಕು ಅವರ್‌ದಾಗಿತ್ತ್. ಮಗಳಿಗೇನ್ ಕಡ್ಮೆ ಮಾಡ್ದವು ಅಲ್ಲ.

ಒಂದ್ ಹೊತ್ತುನ ಊಟಕೆ ಗತಿ ಇಲ್ಲದರು ಮಗಳ ಮೋರೆ ನೋಡಿ ಹೊಟ್ಟೆ ತುಂಬಿಸಿಕಣ್ತಿದ್ದ.

ಜೀವನದ ಸಾಗರಲಿ ಸಂತಾನದ ಒಟ್ಟಿಗೆ ಬೊದ್ಕೊಕು ಅಂತ ನೆನ್ಸಿದ. ಇವ್ಕೆ ಯಮ ಪಾರ ಕಾದ್ ಕುದ್ದದ್ ಗೊತ್ತಾತ್ಲೆ. ನೆಂಟ್ರ ಮದ್ವೆಗೆ ಹೋದ ಗಂಡ, ಹೆಣ್ಣ್, ಹೆಣ ಆಗಿ ಬಂದಿದ್ದ. ಕುಡ್ತದ ಅಮಲ್‌ಲಿ ಇದ್ದ ಬಸ್ಸ್ ಡ್ರೈವರ್ ಅವರ ಇನ್ನ್ಯಾರ್ ಕಾಣದ ಊರಿಗೆ ಕಳ್ಸಿಕೊಟ್ಟಿತ್.

ಅಪ್ಪ, ಅಮ್ಮನ ಸಾವುನ ಸುದ್ದಿ ಕೇಳ್ದ ರಾಧ ಹೆಂಗೆ ಇರ್ದು? ಅವಳ ಅಮ್ಮನ ಹೊಟ್ಟೆ ಅಡಿಲಿ ಮಲ್ಗಿ ಬೆಳೆಯಕಾದ ರಾಧ ಅವರ್‌ಂದ ದೂರ ಆತ್.

ಈಗ ಅವಳ ಚಿಕ್ಕಮ್ಮನ ಮಂಜ ಮಹೇಶ್ ಅವಳ ಸಾಂಕ್‌ತಿತ್ತ್. ಮಹೇಶ್ ಬೊದ್ಕು ನಡ್ಸಿಕೆ ಟೈಲರಿಂಗ್ ಮಾಡ್ತಿತ್. ಅವನ ಅಪ್ಪ, ಅಮ್ಮಂಗೆ ಒಬ್ಬನೇ ಮಂಜ ಆಗಿತ್ತ್. ಮಹೇಶ್ ಅಪ್ಪನ ಕಳ್ಕಂಡ್ ಅಮ್ಮ ಕ್ಯಾನ್ಸರ್‌ಂದ ಹಾಸಿಗೆ ಹಿಡ್ದಿದ್ದ. ಈಗ ಚಿಕ್ಕಮ್ಮನ ಚಾಕರಿ ರಾಧಂಗೆ ಸಿಕ್ಕಿತ್. ತಂಗೆನ ಬೇಕು–ಬೇಡಗಳ ತೀರ್ಸಿಕೆ ಅಷ್ಟ್ ದುಡ್ಡು ಇಲ್ಲದಿದ್ದರು ಅವ ಮಾಡ್ದ ಕೆಲ್ಸಲಿ ಸಿಕ್ಕುವ ಸಂಬಳಲಿ ಇವಳಿಗಾಗಿ ಎಲ್ಲ ತಂದ್ ಕೊಡ್ತಿತ್ತ್. ಅಣ್ಣ, ತಂಗೆನ ಹೊಂದಾಣಿಕೆನ ಯಾರಂದಲು ದೂರ ಮಾಡಿಕೆ ಸಾಧ್ಯ ಇಲ್ಲದ ಹಾಂಗೆ ಇತ್ತ್. ಅಂದೊಂದ್ ದಿನ ಮಹೇಶನ ಅಮ್ಮ ಕಣ್ಮ್‌ಚ್ಚಿದ. ಕಾಲ ಕಳ್ದ ಹಂಗೆ ರಾಧನ ಕಾಲೇಜ್ ಜೀವನ ಸುರು ಆತ್.

ಅಂದ್ ಅವಳಿಗೆ ಕಡೆ ಪರೀಕ್ಷೆ ದಿನ. ಬೇಜಾರಲಿ ದೋಸ್ತಿಗಳ ಒಟ್ಟಿಗೆ ಸೇರಿ ಹೊರಗೆ ಬಾಕನ ಅವಳಿಗಾಗಿ ಕುದ್ದಿದ್ದ ಮಹೇಶನ ದೋಸ್ತಿ ಸತೀಶ ದೊಡ್ಡ ಸುದ್ದಿನ ಹೊತ್ತ್ ತಂದಿತ್ತ್. ಮಹೇಶ್‌ನ ಪರಲೋಕ ಪ್ರವೇಶ ಇದ್ದಕಿದ್ದ ಹಾಂಗೆ ರಕ್ತದ ಒತ್ತಡ ಜಾಸ್ತಿ ಆಗಿ ಕಣ್ಮ್‌ಚ್ಚಿದ ಸುದ್ದಿ ರಾಧಂಗೆ ಗೊತ್ತಾಗಿ ಕಣ್ಣ್‌ಗೆ ಕತ್ತಲೆ ಕಂಡ್ ಜ್ಞಾನ ಕಳ್ಕಂಡ ರಾಧನ ಸತೀಶನೇ ಆಸ್ಪತ್ರೆ ಸೇರ್‍ಸಿತ್. ಸೊಯ ಬಂದ ರಾಧ ದುಕುಡ್ಸಿ ಮರ್‍ಬದೆ.

'ಅಪ್ಪ, ಅಮ್ಮ, ಚಿಕ್ಕಮ್ಮ, ಒಟ್ಟಿಗೆ ಅಣ್ಣನ ಕೂಡ ಕಳ್ಕಂಡೆ. ನನ್ನ ಜನ್ಮಲಿ ತೀರ್‍ಸುವ ಋಣ ಇನ್ನೊಬ್ಬರ ಸಾವುನ ನೋಡ್ದೆ ನನ್ನ ಕೆಲ್ಸ' ಅವಳಿಗೆ ಗೊತ್ತಿಲ್ಲದವರ ಹಾಂಗೆ ಇತ್ತ್. ಸುತ್ತ ಮುತ್ತ ನೋಡ್ರೆ ಗುರ್ತ ಇಲ್ಲದ ಮೊನ್ಸ್‌ರ್. ಗಂಡ್, ಹೆಣ್ಣ್‌ನ ಮೋರೆಗ, ಹಂಞ ದೂರಲಿ ನಾಲ್ಕೈದ್ ಜನ ಸಾಧಾರಣ ಪ್ರಾಯದವು ಅವರವರ ಜೀವನಲಿ ಆದ ಘಟನೆಗಳ ಹೇಳಿಕಂಡ್ ಇದ್ದ.

ತುಂಬಾ ಪ್ರಾಯ ಆದ ಅಜ್ಜ, ಅಜ್ಜಿ, ಇಬ್ಬರ ಒಂದ್ ಜೋಡಿ, ಕುದೋಲಿಗೆ ಕಪ್ಪು ಬಣ್ಣ ಹಾಕಿಕಂಡ್ ಇನ್ನು ಪ್ರಾಯ ಆಗದವರ ಹಂಗೆ ಬಣ್ಣದ ಬಟ್ಟೆಗಳ ಹಾಕಿಕಂಡ್, ಕೆಬಿಗೆ ಮೊಬೈಲ್ ವಯರ್ ಸುತ್ತಿಕಂಡ್, ಈ ಜಗತ್ತೇ ಹಿಂಗೆ ಒಳದ್ ಅಂತ ಆಚೆ–ಈಚೆ ನಡ್ದಾಡ್‌ತ್ತಿದ್ದ.

ರಾಧ ಅಂದ್ ಅಪ್ಪನ ಒಟ್ಟಿಗೆ ಇಡೀ ಸುತ್ತಿಕಂಡ್ ಬರ್‍ತಿದ್ದ ದಿನಗಳ ನೆನ್ಸಿ ಅವಳ ಮೈ ಬೆಗರಿಕೆ ಸುರು ಆತ್.

ರಾಧನ ಮೋರೆ ನೋಡಿ 'ರಾಧ ವಿಧಿ ಆಟದ ಮುಂದೆ ಏನೂ ಮಾಡಿಕೆ ಆಗ್ಲೆ ನಮ್ಮ ಹಣೆಲಿ ಹೆಂಗೆ ಆ ದೇವ್ರು ಬರ್‍ದುಟೊ ಹಂಗೆ ಆದೆ. ಅದ್ಕೆ ಯಾರೂ ಕಾರಣ ಅಲ್ಲ.' ಅವಳ ಸಮಾಧಾನ ಮಾಡ್ತ್.

ರಾಧ ಮನ್ಸ್ ಗಟ್ಟಿ ಮಾಡಿ 'ಸತೀಶಣ್ಣಾ...' ಅಂತ ಮರ್‍ಬತ್. ಅಣ್ಣ ಅನ್ನುವ ಸ್ವರಕೆ ಅವನ ಕೈಕಾಲ್ ನಡ್ಗಿಕೆ ಸುರು ಆತ್.

'ನಂಗು ಒಂದ್ ತಂಗೆ ಇರ್‌ತ್ತಿದ್ದರೆ!' ರಾಧನ ಮಾತಿಗೆ ಬೆಲೆ ಕೊಟ್ಟತ್. 'ಅಣ್ಣ ಇನ್ನ್ ನಂಗೆ ನನ್ನವು ಅಂತ ಯಾರ್ ಇಲ್ಲೆ. ಇನ್ ಬೊದ್ಕಿ ಪ್ರಯೋಜನ ಇಲ್ಲೆ.' ರಾಧನ ಬೇಜಾರ್‌ನ ಹೇಳಿಕಣ್ತ್. 'ನಿನ್ನ ಅಣ್ಣನ ಒಟ್ಟಿಗೆ ಇದ್ದ ಪ್ರೀತಿನ ತಕಂಡ ಆ ಪ್ರೀತಿಗೆ ಜೀವ ಕೊಡುವ ಕೆಲ್ಸ ನನ್ನದ್. ನಾನೇ ನಿನ್ನ ಅಣ್ಣ, ನೀನೆ ನನ್ನ ತಂಗೆ' ಸತೀಶನ ಮಾತಿಗೆ ತಲೆ ಆಡ್ಸಿತ್. ದಿನ ಕಳ್ದಾಂಗೆ ಕಳ್ಕಂಡ ಅಣ್ಣನ ನೆನ್ಪುಂದ ದೂರ ಆತ್. ಸತೀಶನ ಒಟ್ಟಿಗೆ ಒಡ ಹುಟ್ಟಿದ ಅಣ್ಣನ ಹಂಗೆ ಪ್ರೀತಿ ತೋರ್‍ಸಿತ್. ಅವು ಇಬ್ಬೋರ್ ಬೇರೆ ಬೇರೆ ಅಮ್ಮನ ಮಕ್ಕ ಆದರೂ ಆ ಬೇಧ ಅವ್ಕೆ ಬಾತ್ಲೆ.

ಕಳ್ಕಂಡ ಅಪ್ಪ, ಅಮ್ಮನ, ಮರಣ ದೃಢೀಕರಣಕೆ ಅಣ್ಣ, ತಂಗೆ ಕೋರ್ಟ್‌ನ ಎದುರು ಕುದ್ದಿದ. ಯಾಗ ನಮ್ಮ ಕರ್‍ದವೆ ಅನ್ನುವ ಆಸೆ ಬೆಟ್ಟದಷ್ಟ್ ಹೊತ್ತಿದ್ದ.

## ಹೊಸ ಬೊದ್ಕು

ರಾಧನ ಮನೆ ಹಕ್ಕಲೆ ಅವಳ ಸಂಬಂಧನು ಹೌದು. ಅವನ ಕೆಲ್ಸದ ಮೇಲೆ ಕೋರ್ಟ್‌ಗೆ ಬಂದಿತ್. ಇವು ಇಬ್ಬೋರ್ ಕುದ್ದ ಕತೆ ಬೇರೆ ಆದರು. ಅವ ತಿಳ್ಕಂಡ ಕತೆ ಬೇರೆ.

'ನೀ ಯಾರ ಒಟ್ಟಿಗೆ ಕುದ್ದದ್ ಮಾನ ಮಾರ್ಯಾದೆ ಇಲ್ಲದೆ ಇವನೆ ಸಿಕ್ಕಿದ ನಿಂಗೆ'? ಏನೇನೊ ಹೇಳಿಕೆ ಸುರು ಮಾಡ್ತ್.

'ಇವ ಬೇರೆ ಯಾರ್ ಅಲ್ಲ ನನ್ನ ಅಣ್ಣ ಸತೀಶ' ರಾಧನ ಮಾತ್ ಅವನ ಕೆಬಿಗೆ ಬೀತ್ಲೆ.

ಮಾರನೆ ದಿನ ಊರೀಡಿ ರಾಧ ಸತೀಶನ ಸುದ್ದಿ ತುಂಬಿ ಹೋಗಿತ್ತ್. ಅಣ್ಣ, ತಂಗೆ ಅನ್ನುವ ಮಾತ್‌ಗೆ ಪ್ರೇಮಿಗ ಅಂತ ಪಟ್ಟ ಕಟ್ಟಿ ಬುಟ್ಟತ್. ಅಣ್ಣ ತಂಗೆನ ಹೊಂದಾಣಿಕೆನ ವಿವರ್ಸಿ ಹೇಳೊಕು ಅಂತ ನೆನ್ಸಿರೆ ಅದರ ಅರ್ಥ ಮಾಡಿಕಣುವ, ಸರಿ ಆಗಿ ಕೇಳಿಕಣ್‌ವ ಕೆಬಿಗ ಇತ್ಲೆ. ಸತೀಶನ ಮನೆಗೆ ಸುದ್ದಿ ಮುಟ್ಟಿತ್. 'ಓದಿಕೆ ಮಂಜನ ಹೊರಗೆ ಕಳ್ಸಿರೆ ಪ್ರೇಮಲಿ ಮುಳ್ಗಿ ಅವಳಿಗೆ ಮೊರ್ಲು ಆಗಿ ಹೆತ್ತವುಕೆ ತಿರ್ಗಿ ಕಲ್ಲ್ ಹೊಡೆಕೆ ನೋಡ್ದೆ. ಇಂಥ ಮಂಜ ಇದ್ದ್ ಏನ್ ಪ್ರಯೋಜನ ಮಂಜ ಇದ್ದರು ಇದ್ದ್ ಸತ್ತಾಂಗೆ' ಅವನ ಅಪ್ಪ ಕಾದ ಕಲ್ತ್‌ಪದ ಹಂಗೆ ಆದ.

ನಡ್ದ ಕಥೆಗಳ ಅಪ್ಪ, ಅಮ್ಮನ ಒಟ್ಟಿಗೆ ನಾನೇ ಸರಿಯಾಗಿ ವಿವರ್ಸಿ ಹೇಳ್ನೆ ಅಂತ ಮನೆ ಕಡೆ ಹೊರ್ಟಿತ್.

ಮನೆ ಮೆಟ್ಲ್ ಕಲ್ಲ್ ಹತ್ತಿಕೆ ಮುಂದೆ ಅವನ ಕುತ್ತಿಗೆಗೆ ಕೈ ಹಾಕಿ ಹೊರಗೆ ದೂಡಿ ಹಾಕಿದ ಅವನ ಅಪ್ಪ. ನಡ್ದ ಕಥೆಗಳ ಹೇಳಿಕೆ ಮುಂದೆ ಸತೀಶ್ ಜಾಲ್ ತಲೇಲಿ ಬಿದ್ದ್ ಹೋಗಿತ್ತ್.

'ಇವ್ಕೆ ಕಷ್ಟಗಳ ಅರ್ಥ ಮಾಡಿಕಣ್‌ವ ಹೃದಯಗ ಇಲ್ಲೆ. ಹೆತ್ತವುಕೆ ನಾ ಬೇಡದ ಹಂಗೆ ಆದ ಮೇಲೆ ಯಾರಿಗಾಗಿ ನಾ ಬೊದ್ಕುದು?' 'ಹೌದ್ ರಾಧಂಗೆ ಬೇಕಾಗಿ ಬೊದ್ಕೊಕು. ಅವಳ ಜವಾಬ್ದಾರಿ ನನ್ನ ಮೇಲೆ ಉಟ್ಟು. ಕೊಟ್ಟ ಮಾತ್‌ಗೆ ತಪ್ಪಿಕಿಲೆ' ಸತೀಶನ ತಲೆಲಿ ನೂರಾರ್ ಯೋಚನೆ ಹುಟ್ಟಿತ್.

ಇವನ ನೋಡ್ದ ಆಕಾಶ ಕೆಟ್ಟ ನಗೆ ತೋರ್ಸಿತ್. ಬೆಳ್ಳಿ ಮೋಡಗ ಹೀಯಾಳಿಸ್ತುಟ್ಟು. ಹಕ್ಕಿಗ ಅಪಶಕುನ ಹಾಡ್ತಾ ಒಳ. ಇದರೆಲ್ಲ ಕಂಡ ಸತೀಶನ ಮೋರೆ ಮಂಕಾತ್. ಮತ್ತೆ ತಂಗೆನ ನೆನ್ಪಾಗಿ ಅವಳ ಕಡೆ ನಡ್ತ್. ಮಂಕಾದ ಅಣ್ಣನ ಮೋರೆ ನೋಡಿದ್ದ ರಾಧ 'ಅಣ್ಣಾ ಇಲ್ಲಿ ಬಾ' 'ಏನ್ ವಿಷಯ' 'ಅಣ್ಣ ಇಲ್ಲಿ ನೋಡ್. ಕಣ್ಣ್ ಕಣ್ಣ್‌ಗ ಒಂದಾದರೆ ಒಂದೇ ತರದ ಹಣ್ಣ ತಂಗೆನ ಭಾವನೆ ಇದ್ದ್ ಅಲ್ಲಿ ಗೆಳೆತನ ಹುಟ್ಟಿದೆ. ಆದರೆ ಎಲ್ಲದರ ಮೀರ್ಸುವಂತ ನಮ್ಮ ಅಣ್ಣ ತಂಗೆನ ಸಂಬಂಧ ನಮ್ಮ ಇಬ್ಬರ ಆತ್ಮಲಿ ಗಟ್ಟಿ ಆಗಿ ಅಣ್ಣ, ತಂಗೆನ ಸಂಬಂಧನ ಕಂಡ್ ಕಂಡ ನಾವ್ಗೆ ಈ ಸಮಾಜಲಿ ನಾವು ಎಲ್ಲವರ ಕಣ್ಣ್‌ಗೆ ಬಲಿ ಆಗುವ ಹಂಗೆ ಆತ್ ನಮ್ಮ ಜೀವನಲಿ. ಅಣ್ಣ ತಂಗೆ ಅನ್ನುವ ಬದ್ಲ್ ಪ್ರೇಮಿಗಳ ಪಟ್ಟ ಕಟ್ಟಿದ. ಒಡ ಹುಟ್ಟಿದ ಅಣ್ಣ ಅಲ್ಲದರು ಅವರ್‌ಂದ ಹೆಚ್ಚಿನ ಪ್ರೀತಿ, ಕುಸಿ, ನೀ ಕೊಟ್ಟ. ಎಲ್ಲ ಕಷ್ಟಗಳ

ಮರ್ತ್ ಸುಖದ ಕಡೆ ತಿರ್ಗುವ ಹೊತ್ತ್‌ಲಿ ನಮ್ಮ ಮನ್ಸ್‌ನ ಕನ್ನಡಿನ ಒಡ್ದ್ ಹಾಕುವೆ. ಈ ಜನಗ ನಮ್ಮ ಬೇರೆ ಬೇರೆ ಮಾಡಿಕೆ ನೋಡ್ತ ಒಳ ಅಣ್ಣ. ಅದ್ಕೆ ಬೇಕಾಗಿ ನಾ ದೂರ ಹೊರ್ಟ್ ಹೋನೆ' ತಂಗೆನ ಮಾತ್ ಕೇಳಿ ಅವನ ತಲೆ ಮೇಲೆ ಆಕಾಶ ಜಾರಿ ಬಿದ್ದ ಹಂಗೆ ಆತ್. ನಿತ್ತ ನೆಲ ಕೊರ್ಕ್ಂಡ್ ಹೋತ್.

'ರಾಧ... ನಿ ಎಲ್ಲಿ ಹೋದಿಯ? ಹೋಕೆ ಆಗದ್ ನನ್ನ ಬುಟ್ಟ್ ಎಲ್ಲಿಗೂ ಹೋದು ಬೇಡ ನಿಂಗೆ ಬೇಕಾಗಿ ನನ್ನ ಜೀವ ಉಳ್ಸಿಕಂಡೆ ಹೆತ್ತ ಅಪ್ಪ, ಅಮ್ಮಂಗೆ ನನ್ನ ಮೇಲೆ ನಂಬಿಕೆ ಇಲ್ಲದಾಂಗೆ ಆತ್. ನನ್ನ ಮನ್ಸ್‌ನ ತಿಳ್ಕಂಬಕೆ ಆಗದ ಅವ್ಕೆ ಸಂಬಂಧಗಳ ತುಂಡ್ ಮಾಡ್ದ. ಅವು ಕೊಟ್ಟ ಕಷ್ಟಕೆ ನಾ ಅಂದೇ ಸಾಯಕಾಯ್ತ್. ನಿನ್ನ ಜೀವನದ ಪ್ರಶ್ನೆ ಹುಟ್ಟಿಕಂಡ್ ಮತ್ತೆ ನೆನ್ಪಾತ್ (ನೆನ್ಪಾತ್) ನಿಂಗಾಗಿ ಇದ್ದ ಈ ಜೀವನ ಬೊದ್ಕುವ ಹಾಂಗೆ ಮಾಡುವಂತದ್ ನಿನ್ನ ಕೈಲಿ ಉಟ್ಟು ಒಮ್ಮೆ ಯೋಚನೆ ಮಾಡ್' ಕೈ ಮುಗ್ದು ಹೇಳ್ತ್.

'ಇಲ್ಲೆ ಅಣ್ಣ ನಾ ಇಲ್ಲಿ ಇರ್ದುಲೆ. ಇದ್ದ್ ಬೊದ್ಕಿಕೆ ಸಾಧ್ಯ ಇಲ್ಲೆ' ಹೊರ್ಟ್ ಹೋತ್ ರಾಧ.

ಹಂಞ ದೂರ ನಡ್ದ್ ಹೋಕನ 'ತಂಗೆ'.... ಕಿರ್ಚಿದ ಸ್ವರ ಕೇಳ್ತ್. ರಾಧ ತಿರ್ಗಿ ನೋಡ್ತ್. ಸತೀಶ ಅಲ್ಲೆ ಹಕ್ಕಲೆ ಇದ್ದ ಬಾಮಿ ಕಟ್ಟೆ ಮೇಲೆ ಹತ್ತಿ ನಿತ್ತಿತ್.

'ಅಣ್ಣ'... ಜೋರಾಗಿ ಕರಿಯಕೆ ಮುಂದೆ ಸತೀಶ್ ಬಾಮಿ ಒಳಗೆ ಬಿದ್ದ್ ಆಗಿತ್.

ವಿಧಿ ಆಟದ ಮುಂದೆ ಏನೂ ನಡೆಕಿಲೆ ದೇವ್ರು ಹಣೆಲಿ ಹೆಂಗೆ ಬರ್ದುಟು ಹಂಗೆ ಆದೆ. ಸತೀಶನ ಮಾತ್ ರಾಧನ ಕೆಬಿಗೆ ಮತ್ತೆ ಮತ್ತೆ ಕೇಳ್ತಿತ್. ಅಂದ್‌ಂದ ರಾಧ ಒಂಟಿ ಆಗಿತ್ತ್.

* * * * * *

# ಟಿಕೇಟ್ ಹೆಣ್ಣ್

ಅಂದ್ ಸಂತೆ ದಿನ. ಮಧ್ಯಾನ ಆಕನ ಜನಗಳ ಸಾಗಿಸುವ ಬಸ್ಸ್ ಬಂದಿತ್ತ್. ಬಸ್ ನಿಲ್ಲುವ ಜಾಗಲಿ ಮುವತ್ತ್ ಮುವತ್ತೆರಡ್ ವರ್ಷದ ಪೊರ್ಲುನ ಗೂಡೆ ಬಸ್ಸ್‌ಗೆ ಹತ್ತಿತ್ತ್. ಆ ಗೂಡೆನ ಪೊರ್ಲು ಮೈ ಬಣ್ಣ, ಮೈ ಕಟ್ಟ್, ಚುರ್ಕು, ಅವಳ ಬಟ್ಲ್ ಮೋರೆ, ಅವಳಿಗೆ ಒಪ್ಪುವ ಆ ನೀಲಿ ಸೀರೆ, ಸೀರೆಗೆ ಒಪ್ಪುವ ರವುಕೆ, ಕುತಿಗೆಗೆ ಹತ್ತ ಕಾಂಬ ಎರಡೆಳೆ ಚಕ್ರ ಸರ, ಕೆಬಿಲಿ ಮುತ್ತುಂದ ಜೋಡ್ಸಿದ ಉಯ್ಯಾಲೆ ಆಡುವ ಬೆಂಡ್, ಎತ್ತಿ ಕಟ್ಟಿದ ತಲೆ ಸೂಡಿ, ಅದರ ಬಲ ಪಕ್ಕಕೆ ಮುಡ್ದ್ ಗುಲಾಬಿ ಹೂವು, ಹಣೆಲಿ ಕುಂಕುಮ, ಒಟ್ಟಾರೆ ನಾಪೊರ್ಲ್ – ನೀ ಪೊರ್ಲ್ ಕೇಳುವ ಹಂಗೆ ಇತ್ತ್. ಈ ಗೂಡೆನ ಹಕ್ಕಲೆ ಸುಮಾರ್ ಅರ್‌ವತ್ತ್– ಅರ್‌ವತ್ತೆರಡ್ ವರ್ಷ ಪ್ರಾಯದ ಅಜ್ಜ ನಿತ್ತಿದ್ದ. ಬಸ್ಸ್ ಹೋಕನ ಆಚೋಮ್ಮೆ, ಈಚೊಮ್ಮೆ ಉಯ್ಯಾಲೆ ಆಡ್ತಿತ್ತ್. ಅಜ್ಜಂಗೆ ಬಸ್ಸ್‌ಲಿ ನಿಲ್ಲಿಕೆ ಆಗದೆ, 'ಓ ದೇವ್ರೆ ಇವನ ಸಾವುಗೆನ ಮುಂದೆ ಬನ್ನಿ, ಹಿಂದೆ ಹೋಗಿ–ಂತ ಕಂಡೆಕ್ಟರ್ ಹೇಳ್ತ ಉಟ್ಟು ಎಲ್ಲಿಗೆ ಹೋದು? ಜಾಗೆ ಇಲ್ಲದರು ತುಂಬುಸುದರ ಬುಡ್ದುಲೆ' ಅಜ್ಜ ಬೆಗರಿ ಚಂಡಿ ಆದ ಮೋರೆನ ಒರ್ಸಿಕಂಡ. ಅಜ್ಜನ ಪಾಪ ಪುಣ್ಯ ನೋಡ್ದ ಒಬ್ಬ ಹಯ್ದ 'ಬನ್ನಿ ತಾತ ಕುದ್‌ಕಣಿ'ಂತ ಅವನ ಜಾಗೆನ ಬುಟ್ಟ್ ಕೊಟ್ಟತ್.

'ನಿಂಗೆ ದೇವ್ರು ಒಳ್ಳೆದ್ ಮಾಡಲಿ'ಂತ ಅಜ್ಜ ಸೀಟ್‌ಲಿ ಕುದ್ದ. ಅಷ್ಟ್ ಹೊತ್ತ್‌ಗೆ ಹಂಞ ಜನ ಖಾಲಿ ಆಗಿದ್ದ. ಎಲ್ಲವು ಮುಂದೆ, ಮುಂದೆ ಹೋಕೆ ಸುರು ಮಾಡ್ದ. ಈ ಗೂಡೆನು ಅಜ್ಜನ ಹಕ್ಕಲೆ ನಿತ್ತಿತ್ತ್.

ಕಂಡೆಕ್ಟರ್ ಟಿಕೇಟ್ ಕೇಳಿಕಂಡ್ ಬಾತ್. ನಿತ್ತ ಗೂಡೆನ ಅಜ್ಜ ಕೈ ತೋರ್‍ಸಿತ್. ಕಂಡೆಕ್ಟರ್ ಇಬ್ಬರ ದುಡ್ಡುನ ಗೂಡೆನ ಹಕ್ಕಲೆ ಕೇಳ್ತ್. ಗೂಡೆ 'ಟಿಕೇಟ್ ಒಂದೆ'ಂತ ಹೇಳ್ತ್. ಕಂಡೆಕ್ಟರ್ 'ಅವರ್ದ್?' ಅಜ್ಜನ ಕಡೆ ಕಂಡೆಕ್ಟರ್ ಕೈ ತೋರ್‍ಸಿತ್. 'ಅವು ಯಾರ್-ಂತ ನಂಗೊತ್ಲೆ. ನನ್ನ ಟಿಕೇಟ್ ಕೊಡಿ, ಗೂಡೆ ಕಂಡೆಕ್ಟರ್‌ನ ಕೈಗೆ ಇಪ್ಪತ್ತ್ ರೂಪಾಯಿ ಹಾಕಿತ್.

ಕಂಡೆಕ್ಟರ್‌ಗೆ ಅಚ್ಚರಿ ಆತ್. 'ನಿಮ್ಮ ಟಿಕೇಟ್ ಯಾರ್ ಕೊಟ್ಟವೆ' ಅಜ್ಜನ ಕೇಳ್ತ್.

'ಏಯ್ ನಮ್ಮ ಇಬ್ಬರ ಟಿಕೇಟ್ ತಕ. ನಾ ತಕಣ್‌ತ್ಲೆ; ದೊಡ್ಡ ಸ್ವರ ಎಳ್ದ್ ಗೂಡೆನ ಕಡೆ ನೋಡಿ ಅಜ್ಜ ಹೇಳ್ದ್.

'ಓ ಅಜ್ಜ ನೀ ಎಂಥೆಂಥೋ ಮಾತಾಡ್ತಾ ಒಳರಿ. ನೀವ್ಗೆ ಅರ್‌ವತ್ತ್ ಆವುಟು ಅದ್ಕೆ ನಿವುಗೆ ಅರ್ಲ್-ಮರ್ಲ್. ಹಂಞ ಮೊರ್‍ಯಾದೆ ಕೊಟ್ಟ್ ಮಾತಾಡಿ. ಗೂಡೆ ಅಜ್ಜಂಗೆ ಕೈ ತೋರ್‍ಸಿತ್.

'ಅರ್ಲ್-ಮೊರ್ಲ್ ನಂಗೆ ಅಲ್ಲನೆ. ನಂಗೆ ನೆನ್ಪ್, ದೃಷ್ಟಿ, ಎಲ್ಲ ಸರಿ ಉಟ್ಟು. ನೀ ನನ್ನ ಟಿಕೇಟ್ ತಕಂಬಕೆ ಆಸೆ ಮಾಡ್ತ್ ಒಳ. ನಂಗೆ ನೀ ಸಿಕ್ಕಿದ್ ಒಳ್ಳ ಹೆಣ್ಣ್ ನೀ, ಅಷ್ಟು ಹೊತ್ತ್‌ಗೆ ಬಸ್ಸ್‌ಲಿ ಇದ್ದ ಜನಗ ಈ ಗಂಡ, ಹೆಣ್ಣ್‌ನ ಜಗಳ ಕೇಳಿ ನೆಗಾಡಿಕೆ ಸುರು ಮಾಡ್ದ್.

ಒಬ್ಬೊಬ್ಬ ಒಂದೊಂದ್ ರೀತಿ ಹೇಳಿಕಂಡ. ಒಬ್ಬ ಹೇಳ್ತ್. ಏನ್ ಮಾರಾಯ ಈ ಗೂಡೆಗೆ ಎಂಥ ಪ್ರಾಯ ಆವುಟು? ಆ ಅಜ್ಜನ ಮೊದ್ವೆ ಆದ್ ಬಾರಿ ವಿಶೇಷ. ಎಲ್ಲಿಗಾದ್ರ್ ಹೋಕೆ ಇದ್ದರೆ ಒಟ್ಟಿಗೆ ಜನ ಬೇಕಲ ಅದ್ಕೆ ಕೈಕಾಲ್ ಗಟ್ಟಿ ಇದ್ದ ಗೂಡೆನ ಮೊದ್ವೆ ಆವುಟು. ಪಾಪ ಆ ಗೂಡೆಗೆ ಏನು ಮಾಡ್ಲಿಕಾದ್ಲೆ. ಅವಳ ಅಪ್ಪ, ಅಮ್ಮ-ಂಗೆ ಗೊತ್ತ್ ಬೇಕಾಯ್ತ್. ಹೌದ್ ಹೌದ್ ಜಾಗೆನು ತುಂಬ ಇರ್‍ದು. ಹಂಗೆ ಒಪ್ಪಿರ್‍ದು. ಸುಖಪಡಿಕೆ ಬೇರೆ ದಾರಿ ಇರ್‍ದು-ಂತ ಒಬ್ಬೊಬ್ಬ ಗಂಡ್‌ಸ್‌ಗ ಹೇಳ್ತಿದ.

'ಕಂಡ ಹೆಣ್ಮಕ್ಕಳ ಸುದ್ದಿ ಗೊತ್ತಿಲ್ಲದೆ ಬಾಯಿ ಬಂದ ಹಾಂಗೆ ಮಾತಾಡ್ದು ಒಳ್ಳದಲ್ಲ. ಅವಳ ವಿಧಿ ಹಂಗೆ ಬರ್‍ದಿರ್‍ದು ಯಾಗೋಳ್ ಹೆಣ್ಮಕ್ಕಳ ಕೀಳ್ ಮಟ್ಟಕ್ಕೆ ಇಳ್ಸುದು ಬೇಡ.' ಹಕ್ಕಲೆ ಕುದ್ದ ಹೆಂಗ್ಸ್ ಸಿಟ್ಟ್‌ಂದ ಇವ್ಕೆ ಹೇಳ್ತ್.

'ಹಾಂ ಹೌದ್ ಯಾಕಾಗಿ ಈ ಅಜ್ಜನ ಮೊದ್ವೆ ಆತ್' ಒಟ್ಟಾರೆ ಹೊಟ್ಟೆಗಿದ್ದರೆ, ಬಟ್ಟೆಗಿಲ್ಲೆ. ಬಟ್ಟೆಗಿದ್ದರೆ ಹೊಟ್ಟೆಗಿಲ್ಲೆ ಹಂಗೆ ಆತ್. ಎಲ್ಲವುಕೆ ಒಂದೇ ತರದವು ಸಿಕುದ್ಲೆ. 'ಗಂಡ ಅಜ್ಜ ಆದರೆ ಏನ್? ತುಂಬಾ ಆಸ್ತಿವಂತ ಆಗಿರ್‍ದು. ಅವಳ ಗತ್ತ್ ಪೊರ್ಲು, ನೋಡಿಕನೇ ಗೊತ್ತಾದೆ.'

ನೀ ಸುಮ್ಮನಿರ್. ಗತ್ತ್, ಪೊರ್ಲು, ಇದ್ದ್ ಏನ್ ಸುಖ? ಅವಳಿಗೆ ಅಲ್ಲಿ ಸುಖ, ನೆಮ್ಮದಿ, ಉಟ್ಟುಂತ ನಿಂಗೇನ್ ಗೊತ್ತ್. ಈ ಅಜ್ಜನ ಮೊದ್ವೆ ಆಗುವ ಬದ್ಲ್ ಒಳ್ಳ ಲಕ್ಷಣ ಇರುವ ಹೈದನ ಮೊದ್ವೆ ಆಗಿದ್ದರೆ ಎಷ್ಟ್ ಲಾಯ್ಕ ಇತ್ತ್. 'ನಾವು ಮಾತಾಡಿ ಏನ್ ಸುಖ ಇಲ್ಲೆ. ಅವು ಪಡ್ಕ್‌ಂಡ್ ಬಂದದ್ದರ ಅವೇ ತಿನ್ನೊಕಷ್ಟೆ. 'ನೀ ಮಾತಾಡ್ಬ್ಯಡ ಅವಳಿಗೆ ಗಂಡ ಅಜ್ಜ

ಆತ್‌ಂತ ಕಂಡರು ಬೇರೆ ಏನೂ ಕಡ್ಮೆ ಆಕಿಲೆ. ಈಗಳೇ ಇಷ್ಟ್ ಮೆರ್‍ದದೆ ಇನ್ನ್ ಪೊರ್ಲುನ ಹೈದ ಸಿಕ್ಕಿರೆ ಇವಳ ಹಿಡ್ಡ್ ನಿಲ್ಸ್‌ವು ಇರಿಕಿತ್ಲೆ. ಈ ಅಜ್ಜ ಗಂಡನ ಇಷ್ಟ ಪಡಿಕೆ ಇಷ್ಟೊಂದು ಇದ್ ಸಿಂಗಾರ ಮಾಡಕಾಯ್‌ತ?'

'ಅಲ್ಲ ಈ ಅಜ್ಜಂಗೆ ಇಷ್ಟ್ ಪ್ರಾಯ ಆದರು ಅವರ ಹಠ ಬುಡದೆ ಬಸ್‌ಲಿ ಒಳದ್–ಂತ ಗೊತ್ತಾದ್ಲೆನಾ! ಅವರ ಮಾತೆಂತ, ಅವರ ನೋಟ ಎಂಥ, ಅವಳನ್ನೇ ಕಣ್ಣ್‌ಲಿ ಕಣ್ಣ್ ಇಸಿ ನೋಡ್ತ್‌ನೇ ಉಟ್ಟು' ಕೆಲವು ಹೆಣ್ಮ್‌ಕ್ಕ ಕೂಡ ಅವರ ಸುದ್ದಿ ಮಾತಾಡ್ದ.

'ಅಜ್ಜನ ಆಸ್ತಿಗಾಗಿ ಮೊದ್ವೆ ಆದರೆ ಅವ್ಕೆ ಒಂದ್ ಟಿಕೇಟ್ ತೆಗೆಕೆ ಹಿಂದೆ, ಮುಂದೆ ನೋಡ್ದೆ ಆ ಗೂಡೆ. ಇಂತವರ ನೋಡ್‌ಕನ ನಾವ್ಗೆ ಗೊತ್ತಾದ್ಲೆನ ಇದ್ಕೆ ಬೇರೆವರ ಕೈವಾಡ ಉಟ್ಟು–ಂತ. ಅಜ್ಜನ ಕಣ್ಣ್‌ಗೆ ಮೊಣ್ಣ್ ಹಾಕಿಕೆ ನೋಡುವ ಇವಳ ಬುಡ್ದು ಬೇಡ ಅವರ ಮನೆಗೆ ನಾವೆಲ್ಲ ಪೋಯಿ.' ಕೆಲವು ಗಂಡ್‌ಗ ಹೇಳ್ದ ಮಾತ್‌ನ ಕೇಳ್ಸಿಕಂಡ ಇನ್ನೊಬ್ಬ ಎದ್ದ್ ನಿತ್ತ್ ಹೇಳ್ತ್. 'ನೀವ್ಗೆ ಯಾಕೆ ಅವರ ಸುದ್ದಿ ಅದ್ ಅವರವರ ಹಣೆಬರ. ಅವು ಗಂಡ, ಹೆಣ್ಣ್ ಹೆಂಗೆ ಬೇಕರು ಸಾಯಲಿ. ಇದ್ ನಿಮ್ಮಂಥ ವಿದ್ಯಾವಂತರ ಮಾತ್ ಅಲ್ಲ.' ಬಸ್ಸ್ ಒಳೆಗೆಂದ ಕೇಳ್ತ್.

'ಮತ್ತೆ ಎಂಥ ಆದೆಂತ ನೋಡಮಯ' ಬಸ್‌ಲಿ ಇದ್ದ ಎಪ್ಪತ್ತ್, ಎಪ್ಪತ್ತೈದ್ ಜನ ಅವರನ್ನೆ ತಿರ್‍ಗಿ ನೋಡಿಕೆ ಸುರು ಮಾಡ್ದ.

'ನೀವ್ಗೆ ಜಗಳ ಆಡಿಕೆ ಮನೆಲಿ ಹೊತ್ತ್ ಇತ್ಲೇನಾ?' ಕಂಡೆಕ್ಟರ್ ಕೇಳ್ತ್. ಗೂಡೆಗೆ ಸಿಟ್ಟ್ ತಡಿಯಕೆ ಆಗದೆ 'ಏಯ್ ನಂಗೆ ಈ ಅಜ್ಜ ಯಾರ್–ಂತ ನಂಗೆ ಗೊತ್ಲೆ. ನಿಜ ಹೇಳ್ತ ಒಳೆ ಬಾಯಿಗೆ ಬಂದಾಂಗೆ ಮಾತಾಡುವ ಈ ಅಜ್ಜಂಗೆ ಮರ್‍ಯಾದೆ ಇಲ್ಲೆ'–ಂತ ಹೇಳ್ತ್. 'ಏಯ್ ಅಂತೂ ನಿನ್ನ ಬುದ್ಧಿನ ಬಡ್ದುಲೆನಾ ಎಲ್ಲರ ಎದುರಿಗೆ ನನ್ನ ಮೊರ್‍ಯಾದೆ ತೆಗಿಬಿಡ ಚೆನ್ನಾಂತ ಅಜ್ಜ ಬೇಡಿಕಂಡ.

'ಬಸ್‌ಲಿ ಇಷ್ಟ್ ಹಠ ಮಾಡುವ ಹೆಣ್ಣ್ ಮನೇಲಿ ಹೆಂಗೆ ಇರ್‍ದು?' ಬಸ್ಸ್ ಒಳೆಗೆಂದ ಗಂಡಸ್‌ನ ಸ್ವರ ಕೇಳ್ತ್. ಕೆಲವು ಜನ ಬಾಯಿ ತೆಗ್ದ್ ನೆಗಾಡಿಕೆ ಸುರು ಮಾಡ್ದ್. ಆಗ ಅವಳ ಮೋರೆ ಓಂತಿ, ಬಣ್ಣ ಕೆದ್ರಿಸಿದಾಂಗೆ ಕೆಂಪು ಆತ್. 'ಬಸ್‌ಲಿ ಕೂಡ ಇವರ ಜಗಳ, ಇವರ ಕಥೆ ಎಂತ' ಒಬ್ಬಂದ ಒಬ್ಬ ಹೇಳಿಕೆ ಸುರು ಮಾಡ್ದ.

'ಎಷ್ಟ್ ಸರ್ತಿ ನಿಮ್ಮ ಒಟ್ಟಿಗೆ ದುಡ್ಡು ಕೇಳ್ದು? ಅದ್ಯಾಕೆ ಅವರ ಅಷ್ಟೊಂದ್ ಹಿಯಾಳ್ಸುದು? ಪಾಪ, ಹೆಣ್ಣ್–ಂತ ನೀವ್ಗೆ ಅಷ್ಟ್ ಮೊರ್‍ಯಾದೆ ಕೊಡ್‌ಕನ ನೀವ್ಗೆ ಒಂದು ಚೂರ್ ಕನಿಕರ ಇಲ್ಲೆನಾ?' ಕಂಡೆಕ್ಟರ್ ಗೂಡೆನ ಕಡೆ ತಿರ್‍ಗಿ ಕೇಳ್ತ್. 'ಇನ್ನ್ ಹೆಚ್ಚೆ ಮಾತಾಡ್ರೆ ಪೊಲೀಸ್‌ಗೆ ದೂರು ಕೊಟ್ಟನೆ' ಗೂಡೆಗೆ ಸಿಟ್ಟ್ ಬಂದ್ ಹೇಳ್ತ್.

'ನೀವು ದೂರು ಕೊಡ್ದು ಬೇಡ, ನಾನೇ ಪೊಲೀಸ್ ದೂರು ಕೊಟ್ಟನೆ' ಕಂಡೆಕ್ಟರ್ ಹೇಳ್ತ್.

ಬಸ್ಸ್‌ಲಿ ಇದ್ದವುಕೆ ಇನ್ನ್ ಮುಂದೆ ಏನಾದೆ!-ಂತ ಆಸೆ. ಕೋಪ ಮಾಡ್ಬ್‌ಡ ಚಿನ್ನ. ಬಾ ಇಲ್ಲಿ ಕುದ್ರು ಆ ಪರ್ಸ್ ಕೊಡ್ ನಾನೇ ಟಿಕೇಟ್ ಮಾಡ್ನೆ ಇನ್ನ್ ಮುಂದೆ ಬಸ್ಸ್‌ಲಿ ನಿನ್ನ ಒಟ್ಟಿಗೆ ನಾ ಬಾದ್ಲೆ ಮಾರಾಯ್ತಿ.

ಇಂದ್ ಒಂದ್ ದಿನ ನನ್ನ ಮಾತ್ ಕೇಳ್ ಚಿನ್ನ. ಜಗಳ ಮನೆಲಿ ಆಡಕ್. ಈಗ ಕುದ್ರುಂತ ಅಜ್ಜನ ಹಕ್ಕಲೆ ಜಾಗೆ ತೋರ್ಸಿದ ಅಜ್ಜ. 'ನೋಡಿ ಮಾರಯಿರೆ ನನ್ನ ಪರ್ಸ್‌ನ ಆಗಳೇ ಅವಳ ಹಕ್ಕಲೆ ಕೊಟ್ಟಳೆ. ಇವಳ್ ಹಿಂಗೆ ಮಾಡ್ದು ಸರಿನಾ? ಹಂಞ ಅವಳಿಗೆ ಬುದ್ಧಿ ಹೇಳಿ' ಹಕ್ಕಲೆ ಕುದ್ದವರ ಒಟ್ಟಿಗೆ ಅಜ್ಜ ಹೇಳ್ದ.

ನಿಂಗೆ ಸ್ಟೇಷನ್‌ಗೆ ಹೋಕೆ ಆಸೆ ಉಟ್ಟಾ? ಅಜ್ಜಂದರಿಗೆ ಗೂಡೆಗಳ ಕಂಡರೆ ಬಾರೀ ಸಸಾರ. ಗೂಡೆ ಜೋರ್ ಬೊಬ್ಬೆ ಹಾಕಿತ್.

ಇವರ ಬೊಬ್ಬೆಗೆ ಬಸ್ಸ್ ನಿಧಾನ ಹೋಕೆ ಸುರು ಆತ್. 'ಸ್ಟೇಷನ್‌ಗೆ ಮತ್ತೆ ಪೋಯಿ. ನನ್ನ ಪರ್ಸ್ ಕೊಡ್' ಅಜ್ಜ ಎದ್ದ್ ನಿತ್ತ. ಡ್ರೈವರ್ ಬ್ರೇಕ್ ಹಾಕಿ ಬಸ್ಸ್ ನಿಲ್ಸಿತ್. ನಿನ್ನ ಪರ್ಸ್ ನಾ ಕೊಡಿಕೆ ನನ್ನ ಹಕ್ಕಲೆ ಇಲ್ಲೆ. ಹುಚ್ಚರ ಹಂಗೆ ಮಾತಾಡ್ದು ಬೇಡ. ನಿನ್ನ ಪ್ರಾಯಕೆ ಬೆಲೆ ಕೊಟ್ಟರೆ ಜಗಳಕೆ ಬಂದಿಯ ಥೂ... ನಿನ್ನ ಹಣೆಬರಕೆ. ನಿನ್ನ ತಲೆ ಎಲ್ಲಿಗೋ ಓಡ್ದೆ. ಗೂಡೆ ಬೊಯಕೆ ಸುರು ಮಾಡ್ತ್. 'ಓ ಹೋ- ನೀ ಇಷ್ಟರ ಮಟ್ಟ್‌ಗೆ ಒಳನಾ.. ನಿನ್ನ ಸುಡ್ ಗಾಡ್ ವ್ಯಾನಿಟಿ ಬ್ಯಾಗ್ ಒಳಗೆ ಇನ್ನೊಂದ್ ಪರ್ಸ್ ಇಲ್ಲೆನಾ...! ಅದರ ತೆಗ್ದ್ ತೋರ್ಸು. ನೋಡಿ ಆ ಪರ್ಸ್‌ಲಿ ನನ್ನ ಫೋಟ, ಎಡ್ರಾಸ್ ಎಲ್ಲ ಉಟ್ಟು. ನಾನೇ ತೆಗ್ದ್ ತೋರ್ಸ್‌ಕಾ? ಹಕ್ಕಲೆ ಕುದ್ದವನ ಒಟ್ಟಿಗೆ ಹೇಳಿ ಬಸ್ಸ್ ಬಾಗ್‌ಲ್ ಹಕ್ಕಲೆ ಬಂದ್ ನಿತ್ತಿದ್ದ ಅಜ್ಜ. ಆ ಗೂಡೆ ಬಸ್ಸ್ ಇಳಿವ ಜಾಗೆ ಅಜ್ಜಂಗೆ ಗೊತ್ತಾಗಿತ್ತ್. ಗೂಡೆಗೆ ಬೆಗ್‌ರ್ ಇಳಿಯಕೆ ಸುರು ಆಗಿ ಮೋರೆ ಕೆಂಪಾತ್. ನಡ್ಗುವ ಕೈಲಿ ಪರ್ಸ್‌ನ ಗಟ್ಟಿ ಹಿಡ್ಕಂಡ್ ಅವಳ ಬ್ಯಾಗ್‌ಂದ ಮೆಲ್ಲ ಯಾರಿಗು ಗೊತ್ತಾಗದ ಹಂಗೆ ತೆಗ್ದ್ ಉಸ್ಕ್ ಡಮ್ಮ್ ಇಲ್ಲದೆ ಆಚೆ-ಈಚೆ ನೋಡಿ ಅಜ್ಜನ ಮೋರೆಗೆ ಪರ್ಸ್‌ನ ತೆ....ಗ್ದ್ ಹೊಡ್ತ್. ಬಸ್ಸ್‌ಲಿ ಇದ್ದ ಜನಗಳ ನೂಕೆಂಡ್ ನೂಕೆಂಡ್ ತಲೆ ಬೊಗ್ಗಿಸಿಕಂಡ್ ಬಸ್ಸ್‌ಂದ ಇಳ್ದ್ ಸೀ.....ದಾ ಹೋತ್.

ಅಜ್ಜನ ಹತ (ಬುಟ್ಟತ್ಲೆ) ಬುಟ್ಟತ್ಲೆ. ಬಾಗ್‌ಲ್ ಕರೇಲಿ ಬಗ್ಗೀ ಹೇಳ್ದ 'ಏಯ್ ಕೋಪ ಮಾಡಿಕಂಬಡ ಬಾ... ಇಲ್ಲಿ. ಆಕಸ್ಮಾತ್ ಆಗಿ ಸಿಕ್ಕಿದ ನಿನ್ನಂಥ ಹೆಣ್ಣ್‌ನ ಬರಿ ಪರ್ಸ್‌ಂದಾಗಿ ಸಿಕ್ಕಿದ ಹೆಣ್ಣ್‌ನ ಎಷ್ಟ್ ಸುಲಬಲಿ ಬುಟ್ಟ್ ಕೊಟ್ಟೆ'-ಂತ ಹೇಳ್ದ. ಅಜ್ಜನ ಕಳ್ಳಕಿನನ ನೋಡಿ ಬಸ್ಸ್‌ಲಿ ಇದ್ದ ಜನಗ ಅಡ್ಡ ಅಡ್ಡ ಬಿದ್ದ್ ನೆಗಾಡಿಕೆ ಸುರು ಮಾಡ್ದ.

ಆ ನಗೆ ಗೂಡೆನ ಕೆಬಿಗೆ ಗರಗಸ ಇಸಿದಾಂಗೆ ಆತ್. ಬಸ್ಸ್ ಹೊರ್ಟ್ತ್. ಈಗ ಎಲ್ಲರ ದೃಷ್ಠಿ ಅಜ್ಜನ ಕಡೆ ತಿರ್ಗಿತ್. ಅಜ್ಜನ ಕಳ್ಳ ಕಿಣಿ ಗೊತ್ತಾದರೂ ಈ ನಾಟಕ ಹೆಂಗೆ ಆತ್-ಂತ ತಿಳ್ಕಂಬ ಆಸೆಂದ ಅಜ್ಜನ ಒಟ್ಟಿಗೆ ಕೇಳಿಕೆ ಸುರು ಮಾಡ್ದ. ಅಜ್ಜ ನಗಾಡಿಕಂಡ್ 'ಆ ಗೂಡೆ ಯಾರ್-ಂತ ನಂಗೆ ಗೊತ್ಲೆ. ನಾನು ಬಸ್ಸ್ ಕಾದ್ ಕಂಡ್ ನಿತ್ತಿದ್ದೆ. ಅಲ್ಲಿಂದಲೇ ನನ್ನ

ಹಿಂದೆ, ಹಿಂದೆ, ಬರ್ತಿತ್ತ್. ಏನೋ ಅನುಮಾನ ಬಂದ್ ಅವಳನ್ನೆ ನೋಡ್ದೆ ಅವಳು ನೋಡಿಕೆ ಪೊರ್ಲು ಇದ್ದರು. ಅವಳ ಕಿಣಿ ನೋಡಿ. ಎಷ್ಟ್ ಮೋಸ, ಕಳ್ಳತನ, ಮಾಡಿರ್ದು ಇಷ್ಟರವರೆಗೆ? ನನ್ನ ಜೋಬುಲಿ ಇದ್ದ ಪರ್ಸ್‌ನ ಕದ್ದ್‌ಕಂಡ್ ಅವಳ ಬ್ಯಾಗ್‌ಲಿ ಹಾಕಿತ್ತ್. ಅದ್ ನಂಗೆ ಗೊತ್ತ್ಲೆ–ಂತ ನೆನ್ಸಿತ್. ಲಾಯ್ಕು ಜಾರಿಕಂಬೆ–ಂತ ಎಷ್ಟ್ ಧೈರ್ಯ ಅವಳಿಗೆ ಅವಳ ಯೋಗ್ಯತೆನ ಅವಳಿಗೆ ತೋರ್ಸಿ ಅವಳ ಮೋರೆ ಮೇಲೆ ಬೆಗ್‌ರ್ ಇಳ್ಸೋಕು–ಂತ ಇಷ್ಟ್ ನಾಟಕ ಮಾಡಿ ನೀವ್ಗೆಲ್ಲ ಕಣ್ಣಾರೆ ಕಾಂಬಕೆ ಆತಲ.'–ಂತ ಹೇಳಿ ಅಜ್ಜನ ಪರ್ಸ್‌ಂದ ಪೋಟ ತೆಗ್ದ್ ತೋರ್ಸಿದ. ಕಂಡೆಕ್ಟರ್‌ಗೆ ದುಡ್ಡ್ ಕೊಟ್ಟ್ ಟಿಕೇಟ್ ತಕಂಡ.

ಬಸ್ಸ್‌ಲಿ ಇದ್ದ ಜನಗ ಅವಳ ಜೀವಮಾನಲಿ ಮರಿಯಕೆ ಆಗದ ರೀತಿಲಿ ಮಾಡ್ದರಿ–ಂತ ಅಜ್ಜನ ಬೆನ್ನ್ ತಟ್ಟಿದ. ಬಸ್ ನಿತ್ತಿತ್ತ್. ಅಜ್ಜ ಅವರ ದಾರಿನ ಹಿಡ್ದ್.

ತೊಂದರೆ ಇಲ್ಲೆಯ ಈ ಅಜ್ಜ. ಬಾರೀ ಸುಲಬಲಿ ಟಿಕೇಟ್ ಹೆಣ್ಣ್‌ನ ಮಾಡಿಕಂಡ. ಅವರ ಮಾತ್‌ಗಳ ಕೇಳಿ ನಾವ್ಗೆಲ್ಲ ಬಾರೀ ಕುಸಿ ಆತ್. ಬರೇ ಬಸ್ಸ್ ಟಿಕೇಟ್‌ಲಿ ಒಳ್ಳ ಪಿಕ್ಚರ್ ನೋಡ್ದ್ ಹಂಗೆ ಆತ್–ಂತ್ ಜನಗಳ ಮಾತ್‌ಗ ಗಾಳಿಲಿ ಉರ್ಗಿ ಹೋತ್.

* * * * * *

# ಪ್ರೀತಿ–ಂತ ಹೇಳಿರೆ ಹಿಂಗೆನೆ

ಜಿಡಿಗುಟ್ಟ ಮಳೆ. ಒಂದ್ ವಾರಂದ ಒಂದೇ ತರಲಿ ಹೊಯ್ಯಿತಾ ಉಟ್ಟು. ಜಗಲ್ ತಲೇಲಿ ಕೈ ಕಟ್ಟಿ ಹಳ್ಳನೇ ನೋಡಿಕಂಡ್ ಕುದ್ದ ಗೌಡ್ರ್‌ಗೆ ಏನೋ ಒಂದ್‌ತರದ ಬೇಜಾರ್.ಒಂದ್‌ಕಡೆಂದ ಹೊಯ್ಯುವ ಮಳೆ, ಗಾಳಿ, ಸಿಡ್ಲ್, ಗುಡುಗು, ಇನ್ನೊಂದು ಕಡೆಂದ ಕರೆಂಟ್ ಕಂಬಗ ಗಾಳಿಗೆ ಬಿದ್ದ್ ಕರೆಂಟ್ ಇಲ್ಲದ್, ಮಳೆಂದಾಗಿ ಹೊರಗೆ ಹೋಕೆ ಬೊತ್ತ್, ಪಿಂಡಿಕಾಯಿ ನೆಣೆನಸಣ್ಣಬೊಳ್ಪುಲಿ ಕತ್ತಲೆನ ಕಳಿವ ಬೇಜಾರ್, ಮನೆ ಒಳಗೆ ಕುದ್ದ್‌ಕುದ್ದ್, ಸಾಕಾಗಿ ಹೋಗಿ "ಮಳೆ ಯಾಗ ದೂರಾದೆ"ಂತ ಗೌಡ್ರ ಮನ್ಸ್‌ಗೆತುಂಬಾ ಬೇಜಾರ್. ಹಟ್ಟಿಲಿ ಇದ್ದ ದನಗಳಿಗೆ ತಿಂಬಿಕೆ ಇಲ್ಲದೆ ದನಗ ಕರಿವ ರಾಗ ಕೇಳಿ ಸುಸ್ತಾದವರಂಗೆ ಇದ್ದ. ಅಂದ್‌ಹಿಂಬೊತ್ತ್, ಬಿಸಿ.ಬಿಸಿ ಚಾಯ, ಹಲ್ಸಿನಕಾಯಿದ್ ಹೊರ‍್ದ ಹಪ್ಪಳ, ಹಿಡ್‌ಕಂಡ್ ಬಂದ ಗೌಡ್ರ ಹೆಣ್ಣ್ ಗೌಡ್ರ ಹೆಕ್ಕಲೆ ಕುದ್ದ್ ಮಾತ್‌ಗೆ ಸುರುಮಾಡ್ದ.

"ಅಲ್ಲಯ ಹಿಂಗೆ ಮಳೆ ಬಂದರೆ ನಾ ಹಾಕಿದಎಲ್ಸ್‌ಂಡೆ ಬೆಂಡೆ, ಎಲ್ಲ ಕರ‍್ಗಿ ಹೋದು"

"ನಿನ್ನ ನೆಟ್ಟಿನ ಸುಟ್ಟ್ ಹೋಗಲಿ, ಮತ್ತೆ ಹಾಕಿರೆಹುಟ್ಟಿ ಬಾದು. ನಮ್ಮ ದನಗಳ ಗತಿ ಎಂಥ ತಿಂಬಕೆ ಆಕಲಾ? ನಾಳೆ ಬನ್ನೆ–ಂತ ಹೇಳಿ ಹೋದ ರಾಮು ಮೊನ್ಸ್ ಬರದೆ ಒಂದ್ ವಾರ ಆತ್." ಗೌಡ್ರು ಗೆತಲೆ ಬಿಸಿ ಆತ್."ಅಲ್ಲಯ ಕೆಲ್ಸಕೆ ಬಂದರೆ ಈ ಮಳೆಗೆ ಎಂಥ ಕೆಲ್ಸ ಮಾಡ್ದೆ? ಈಗ ಅಷ್ಟ್ ದೊಡ್ಡ ಕೆಲ್ಸ ಇಲ್ಲೆ. ದನಗಳಿಗೆ ಬಿಳ್‌ಗ್ಲ್ ಎಳ್ದ್ ಹಾಕಿರೆ ಆತ್."

"ಹಂಗೆ ಅಲ್ಲ ಅವಂಗೆ ಮನ್ನೆ ಜರ ಇತ್ತ್. ಒಟ್ಟಿಗೆ ಸುಟ್ಟ ಕೆಮ್ಮುಲು, ಜರ ಕಡ್ಮೆ ಆದ

ಮೇಲೆ ಬನ್ನೆಂತ ಹೇಳಿತ್. ಹಂಗೆ ಕಡ್ಮೆ ಆತ್ಲೆ ಕಂಡದೆ. ಜೋರ್ ಆತಾ! ಅವಂಗೆ ಉಂಬಕೆ ಗಂಜಿ ಉಟ್ಟಾ ಇಲ್ಲೆನಾ."

"ನೀವೊಮ್ಮೆ ಸುಮ್ಮನಿರಿ. ಅಂತ ಸಣ್ಣ ಕೂಸು ಅಲ್ಲ ಗಂಜಿ ಮಾಡಿ ತಿನ್ನದಿರಿಕೆ. ಅವರಿಗೆ ಈ ಪ್ರಾಯಲಿ ಜರ, ಕೆಮ್ಮುಲು ಯಾವ ಲೆಕ್ಕ."

"ಅಲ್ಲ ಮಾರಾಯ್ತಿ ಅವನ ಮನೆಲಿ ಅವಂಗೆ ಯಾರ್ ಒಳ? ಹೇಳ್. ಅವನ ಇಲ್ಲೆ ನಿಲ್ಸಿಕಣಕಾಯ್ತ್. ಎಂತರ ಮಾಡ್ದು ಈಗ?" ಉಮ್ಮ, ನಂಗೊತ್ಲೆ" ಗೌಡ್ರ ರಾಮಾಯಣ ಕೇಳಿ ಕೇಳಿ ಹೆಣ್ಣ್ ಎದ್ದ್ ಸೀದ ಒಳೆಗೆ ಹೋದ.

ಮಳೆ ನಿಲ್ಲುವದಾರಿ ಕಾಂಬೊದ್ಲೆ. ಮಳೆ ಜೋರು ಜೋರು ಬರ್ತ ಉಟ್ಟು. ಗದ್ದೆ, ಬೊಯಿಲ್, ತೋಟ ಇಡೀ ತುಂಬಿ ಹೋಗಿತ್ತ್ "ತೋಟ ನೋಡಿಕೊಂಡ್ ಬನ್ನೆಂತ" ಹೆಣ್ಣ್‌ನ ಒಟ್ಟಿಗೆ ಹೇಳಿ ಹೋಗಿದ್ದ ಗೌಡ್ರ್.

ಇಡೀ ತೋಟ ಸುತ್ತಿ ಬಾಕನ ಕಮ್ಮುನ ದೈಲಿ ಸೆಕ್ಸಿಕಂಡ್ ಇತ್ತ್ ರಾಮನ ಕಂಬಯಿ ತುಂಡ್, ಇನ್ನೊಂದು ಕಡೆಲಿ ಅವನ ಕೊಡೆ ಇತ್ತ್.

ಇದರ ನೋಡ್ದ ಗೌಡ್ರ್‌ಗೆ "ಛೆ ಇದ್ ಹೆಂಗೆ ಇಲ್ಲಿಗೆ ಬಾತ್ ಅಚ್ಚರಿ!" ಆತ್.ಸೀದ ಮನೆಗೆ ಹೋಗಿ ಹೆಣ್ಣ್‌ನ ಒಟ್ಟಿಗೆ ಹೇಳ್ದ. ಇಂದಾದ್ರ್ ರಾಮ ಕೆಲ್ಸಕೆ ಬಾದು"ಂತಗೌಡ್ರ್ ಮನ್ಸ್‌ಲಿ ನೆನ್ಸಿಕಂಡ್ ಎಲೆ, ಅಡ್ಕೆ ತಿಂದ್‌ಕಂಡ್ ಜಗ್‌ಲ್‌ನ ಆಚೆ, ತಲೆಗೊಮ್ಮೆ ಈಚೆ, ತಲೆಗೊಮ್ಮೆ ಹೋಗಿ ಗಂಟೆ ನೋಡ್ತಿದ್ದ.

ಇಲ್ಲೆ ಬೊಳ್ಪಿಗೆ ಬಾತ್ಲೆ. ಮದ್ಯನ ಆದರೂ ಬಾರದ ರಾಮನ ಮೇಲೆ ಅನುಮಾನ ಆದೆ.

"ಇವನ ಪತ್ತೆ ಇಲ್ಲೆ ಮರಾಯ್ತಿ. ಹೆಂಗಾದ್ರ್ ಮಾಡಿ ಇವನ ಹುಡ್ಕಿ ಹಿಡಿಯದೆ ಬುಡಿಕಿಲೆ–ಂತ ನಾ ಈಗ ಬನ್ನೇಂತ ಹೆಣ್ಣ್‌ನ ಒಟ್ಟಿಗೆ ಹೇಳ್ದ್.

"ಅಲ್ಲ ನೀವ್ಗೆ ಏನ್ ಆವುಟು? ಈ ಕತ್ತಲೆಗೆ ಆ ಕಾಡ್ ದಾರೀಲಿ ಹೋದು? ಅಲ್ಲಿ ಎಂತ ಇದ್ದರು ಗೊತ್ತಾಕಿಲೆ. ಮಳೆ ಬಂದ್ ಗುಂಡಿ, ಗುಡ್ಡು ಆಗಿರ್ದು". ಹೆಣ್ಣ್‌ಗೆ "ನೀ ಸುಮ್ಮನಿರ್. ನಾ ಇಂದೇನ್ ಹೊಸ್ತಾಗಿ ಹೋದು ಅಲ್ಲ. ಆ ದಾರಿನ ನಂಗೇನ್ ಗೊತ್ಲೆನಾ? ಬನ್ನೆ ಈಗ ಗೌಡ್ರ್ ರಾಮನ ಮನೆ ಕಡೆ ಹೊರ್ಟ್ ಹೋದ. ರಾಮನ ಮನೆ ಹಕ್ಕಲೆ ಎತ್ತ್‌ಕನ ಯಾರ ಸುದ್ದಿ ಸದ್ದ್ ಇತ್ಲೆ. ಬೊಳ್ಪನೂ ಇತ್ಲೆ. ಅವನ ಕರಿಯ ನಾಯಿ ಮಾತ್ರ ಗೌಡ್ರ ನೋಡಿ ಬೊಗ್‌ಳ್ತ್. ಗೌಡ್ರ್ ರಾಮನ "ರಾಮ, ರಾಮ" ಅಂತ ಎರಡ್ ಸರ್ತಿ ಕರ್ದ. ಸುದ್ದೇ ಇಲ್ಲೆ. ಅವನ ಚೆದಲೆ ಬಾಗ್‌ಲ್ ಬೊಳ್ಳಿಲಿ ಕಟ್ಟಿಕಂಡ್ ಇತ್ತ್. ಹಿಂದೆನ ಬಾಗ್‌ಲ್ ತೆಕ್ಕಂಡ್ ಇತ್ತ್. "ಛೇ ಇವಂಗೆ ಎಂಥ ಆವುಟು. ಎಲ್ಯಾದ್ರ್ ಹೋಗಿ ಸತ್ತತಾ!" ಬೇಜಾರ್ ಮಾಡಿಕಂಡ ಗೌಡ್ರ್ ಹಂಗೆನೆ ಮನೆಗೆ ತಿರ್ಗಿ ಬಂದ. ಹೆಣ್ಣ್‌ಗೆ ಕೇಳುವ ಆಸೆಲಿ, "ಹೆಂಗೆ ಉಟ್ಟು ರಾಮ ಜರ ಬುಟ್ಟತ್ಲೆನಾ?" "ಎಂತರ ಹೇಳ್ದು, ಅಲ್ಲಿ ಅಂವ ಕಾಂಬೊದ್ಲೆ ಎದುರು ಬಾಗ್ಲ್ ಹಾಕಿ ಇಸಿಟು, ಹಿಂದೆನ ಬಾಗ್ಲ್ ತೆಗ್ದ್ ಇಸಿಟು. ಇನ್ನ್ ಅವನ ದೇವ್ರೇ ಕರ್ಕ್ಕಂಡ್ 36

ಬರೊಕಷ್ಟೆ."

ಗೌಡ್ರ ಹೆಣ್ಣ್‌ಗೆ ತುಂಬಾ ಬೇಜಾರ್‌ಆತ್.ಅವರ ಮಕ್ಕಳ ಹಂಗೆ ಸಾಂಕಿ, ಯಾವ ಭೇದ, ಬಿನ್ನೆ ಮಾಡದೆ ಮನೆವರ ಹಂಗೆ ಕಾಂಬತ್ತಿದ್ದ ಗೌಡ್ರ ಹೆಣ್ಣ್‌ಗೆ ಅವನ ನೆನ್ಸಿ ಕಣ್ಣೀರ್ ಹಾಕಿದ.

"ಪಾಪ ತಬ್ಬುಲಿ. ಅವನ ಅಪ್ಪ, ಅವ್ವಂಗೆ ಒಬ್ಬನೆ ಮಂಜ ಆದರು, ಎಲ್ಲ ಮಕ್ಕಳಿಗೆ ಸಿಕ್ಕಿದ ಪ್ರೀತಿ ಅವಂಗೆ ಸಿಕ್ಕಿತ್ಲೆ. ಅಪ್ಪ ಕುಡ್ದ್ ಅಮ್ಮನ ಒಟ್ಟಿಗೆ ಜಗಳ ಮಾಡಿಕಂಡರೆ ಇವನ ಪ್ರೀತಿ ಮಾಡಿಕೆ ಎಲ್ಲಿ ಪುರುಸೊತ್ತ್ ಉಟ್ಟು? ಅಪ್ಪ ಕೆಲ್ಸ ಮಾಡ್ರೆ ಮುಕ್ಕಾಲ್ ವಾಸಿ ಕುಡಿಯಕೆ ಆತ್. ಹೆಣ್ಣ್ ಕೆಲ್ಸ ಮಾಡ್ರೆ ಅದ್ ದುಡ್ದ್ ದುಡ್ಡ್‌ನ ಕೂಡ ಅವಳ ಪೀಡ್ಸಿ ತಕಂಬಕೆ ಆತ್. ಕುಡಿಯಕೆ ಗಂಜಿ, ತೆಳಿಗೆ ಗತಿ ಇತ್ಲೆ. ಅದರ ಬದ್ಲ್ ಪೆಟ್ಟ್ ತಿನ್ನುತ್ತಿದ್ದ. ಅಮ್ಮನ ಕಷ್ಟಗಳ ಅರ್ಥ ಮಾಡಿಕಂಡ ರಾಮ ಯಾವ ಹಠ ಮಾಡ್ತಿತ್ಲೆ. ಮೂಕು ಮುಟ್ಟ ಕುಡೆತ್ತಿದ್ದ ಅಪ್ಪ ತೀರಿ ಹೋದ ಮೇಲೆ ಅಮ್ಮ ಇಷ್ಟ ಬಂದವನ ಒಟ್ಟಿಗೆ ಈ ಕೂಸ್‌ನ ಬುಟ್ಟ್ ಹೇಳದೆ ಓಡಿ ಹೋತ್. ಗತಿ ಇಲ್ಲದವನ ತಂದ್ ಸಾಂಕಿದೆ. ಈಗ ಅವನೇ ಹೇಳದೆ ಹೋತ್. ರಾಮ ಇರ್‌ಕನ ನಮ್ಮಲ್ಲಿ ಯಾಗೊಳ್ ಡೊಂಗಿ, ಕುಸಾಲ್ ತಪ್ಪುತಿತ್ಲೆ. ಊರ್‌ಲಿ ಏನಾದ್ರ್ ಆದರೆ ನಾವ್ಗೆ ಹೇಳದೆ ಇರ್ತಿತ್ಲೆ. ನಮ್ಮೊಟ್ಟಿಗೆ ಅಷ್ಟ್ ಲಾಯ್ಕಲಿ ಇದ್ದವಂಗೆ ಏನಾತ್?"ಂತ ಗೌಡ್ರ್ ಬೇಜಾರ್ ಮಾಡ್ದ. ಎಲೆ ಅಡ್ಕೆ ಅಗೆತಿದ್ದ ಗೌಡ್ರಿಗೆ ಅವರ ಜೂಲಿ ನಾಲಿ ಕುಂಞ, ಕುಂಞಿಂತ ಹೇಳ್ದ್ ಕೇಳ್ತ ನಿಲ್ಕಿ ನೋಡ್ದ ಗೌಡ್ರ್‌ಗೆ ಮಿಣು ಮಿಣು ಲೈಟ್ ಬೊಳ್ಳು ಕಾಂಬೊತ್ತಿತ್ತ್. ಗೌಡ್ರ್ ಮನ್ಸ್‌ಗಾತ್ "ಇದ್ ರಾಮನೆ" ಂತ. ಒಳೆಗಿದ್ದ ಹೆಣ್ಣ್‌ನ ಕರ್ದ್ ಹೇಳ್ದ ಗೌಡ್ರ್. ಇಬ್ಬೊರ್ ಇದ್ದದರ ನೋಡಿ ಇವ್ಕೆ ಅಚ್ಚರಿ! ಆತ್.

ಗೌಡ್ರ್ ಕಾಲಿಗೆ ಅಡ್ಡ ಬಿದ್ದ್ ಜೋರ್ ಮರ್ಲ್ಟತ್ತ್ ರಾಮ. "ಧನಿಗಳೇ ನಾ ಬೊದ್ಕಿಳೆ. ನಂಗೆ ನಿಮ್ಮ ನೋಡುವ ಬಾಗ್ಯ ಉಟ್ಟು. ಇಲ್ಲದಿದ್ದರೆ ನನ್ನ ಹೆಣನ ನೀವು ನೋಡಕಾಯ್ತ್ ನನ್ನ ಕ್ಷಮಿಸೊಕು" ಗೌಡ್ರ ಕಾಲ್‌ನ ಗಟ್ಟಿ ಹಿಡ್ಕಂಡಿತ್ತ್. "ಎಲ್ಲಿ ಹೋಗಿದ್ದ ಮಾರಾಯ! ಇಷ್ಟ್ ದಿನ?!!

ನಾ ಇವಳ ತುಂಬಾ ವರ್ಷಂದ ಪ್ರೀತಿಸ್ತ ಒಳೆ. ಈಗ ಇವಳ ಬೇರೆ ಕಡೆ ಮೊದ್ವೆ ಮಾಡಿಕೆ ಇವಳ ಮನೆಯವು ಅಂದಾಜ್ ಮಾಡ್ದ್. ಇವಳಿಗೆ ಆ ಸಂಬಂಧನ ಮನ್ಸ್ ಇಲ್ಲದೆ. "ನೀನೆ ನನ್ನ ಮೊದ್ವೆ ಆಕು. ಇಲ್ಲದಿದ್ದರೆ ನಾ ಸತ್ತನೆ" ಂತ ಹೇಳ್ತ್. ಇವಳ ಮನೆಯವು ನಂಗೆ ಹೊಡಿಯಕೆ ಬಂದ" ನಿನ್ನ ಹೆಣ ಬೀಳ್ಸದೆ ಬುಡಿಕಿಲೆ" ಂತ ಹೆದ್ರಿಸಿ ನಂಗೆ ಹೊಡಿಯಕೆ ನನ್ನ ಹುಡ್ಕುತ ಒಳ. ನಾವು ಮಾಡಿಕಂಡ ಪ್ರೀತಿಗಾಗಿ ಪಂಚಲಿಂಗೇಶ್ವರ ಗುಡಿ ಮುಂದೆ ಅರ್ಸಿನ ಕೊಂಬು ಕಟ್ಟಿ ಮದುವೆ ಮಾಡ್ಸಿಕಂಡೆ. ನಾಳೆಂದ ನಾವು ಈ ಊರುಲಿ ಇರ್ದುಲೆ ಎಲ್ಲಿಯಾದ್ರ್ ದೂರ ಹೋದವೆ. ನೀವ್ಗೆ ಹೇಳದೆ ಹೋಕೆ ನಂಗೆ ಮನ್ಸ್ ಬಾತ್ಲೆ." ನಡ್ದ್ ಕಥೆಗಳ ವಿವರ್ಸಿ ಹೇಳ್ತ್.

ಇವರ ಮಾತ್‌ನ ಅರ್ಥ ಮಾಡಿಕೊಂಡ ಗೌಡ್ರ್ ಮತ್ತೆ ಅವರ ಹೆಣ್ಣ್, ರಾಮಂಗೆ ಒಂದ್ ತಿಂಗಕೆ ಉಂಬಕೆ ಬೇಕಾದ ಅಕ್ಕಿ, ಸಾಮಾನ್‌ಗಳ ಮತ್ತೆ ಈ ಗೂಡೆಗೆ ಬೇಕಾದ ಸೀರೆ, ರೌವುಕೆ, ರಾಮಂಗೆ ಬೇಕಾದ ಕಂಬಯಿ ಶರ್ಟ್‌ಗಳ ಗೌಡ್ರ ಹೆಣ್ಣ್ ಒಂದ್ ಚೀಲಲಿ ತುಂಬಿಸಿ ತಂದ್ ಕೊಟ್ಟ. ಖರ್ಚಿಗೆ ತಕ್ಕ ದುಡ್ಡುನ ಗೌಡ್ರು ಕೊಟ್ಟ. ರಾಮಂಗೆ ಇದೆಲ್ಲ ಬೇಂಕು–ಂತ ಮನ್ಸ್‌ಲಿ ಇದ್ದರೂ " ಧನಿಗಳೆ ನಂಗೆ ಯಾಕೆ ಇದೆಲ್ಲ?" ಂತ ಹೇಳ್ತ್. "ನೀ ನಾವು ಕೊಟ್ಟದರ ತಕ. ನೀ ಪೇಟೆ ಕಡೆ ಹೋದರೆ ಪೇಟೆನ ಬೊದ್ಕು ಅಷ್ಟ್ ಸುಲ್ಬ ಅಲ್ಲ. ಹಂಗೆಲ್ಲ ಹೇಳಿಕಾಗದ್. ನಾವು ನಿಂಗೆ ಕೊಟ್ಟದ್ ಕಡ್ಮೆ ಆತ್. ನಿನ್ನ ಬೊದ್ಕು ಲಾಯ್ಕಲಿ ಇರ್‌ಲಿ. ಈ ಹೆಣ್ಣ್ ಮಗಳ ಕೈ ಬುಡ್ಬ್‌ಡ. ನಿನ್ನನ್ನೆ ನಂಬಿ ಬಂದ ಇವಳ ಲಾಯ್ಕ್ ಸಾಂಕ್." ರಾಮಂಗೆ ಬುದ್ದಿವಾದ ಹೇಳ್ದ ಗೌಡ್ರ್.

"ಇವಳ ಕೈ ಬುಟ್ಟರೆ ನಂಗ್ಯಾರ್ ಗತಿ ದನಿಗಳೆ. ಇಷ್ಟ್ ದಿನ ನನ್ನ ಕಷ್ಟ ಸುಖಕೆ ನೀವು ಇದ್ದರಿ. ನಿಮ್ಮಂದ ದೂರ ಆಗ್ತ ಒಳೆ. ಇನ್ನ್ ಮುಂದೆ ಇವಳೇ ನಂಗೆ" ಅವನ ಮನ್ಸ್‌ನ ಮಾತ್ ಹೇಳ್ತ್. "ದನಿಗಳೆ, ಅಮ್ಮಾ ನಾವು ಹೋದವೆ." ಕಾಲ್ ಮುಟ್ಟಿ "ನಿಮ್ಮ ಋಣನ ಈ ಜನ್ಮಲಿ ತೀರ್ಸಿಕೆ ನಂಗೆ ಆಕಿಲೆ". ಗೌಡ್ರ್ ಕೊಟ್ಟ ಕಟ್ಟ್‌ಗಳ ತಲೆ ಮೇಲೆ ಇಸಿಕಂಡ್ ಹೋಗ್‌ತ್ತಿದ್ದ ಮೊದು ಮಕ್ಕಳ ಒಡೆನಾಟನ ಕಳ್ಕ್ಂಡ ಬೇನೆಂದ ಗೌಡ್ರು ಮನೆ ಒಳಗೆ ಹೋಗಿ ಕಣ್ಣ್ ನೀರ್ ಒರ್ಸಿಕೊಂಡ.

ಹಿಂದೆ ಇದ್ದ ಪ್ರೀತಿಗೆ ಈಗ ಎಲ್ಲಿಟ್ಟು ಬೆಲೆ?

* * * * * *

# ಚೋಮನ ದೋಣಿ

ಮರದ ಸಣ್ಣ ಗೆಲ್ಲ್‌ಲಿ ಹಾಕಿದ ರಟ್ಟ್‌ಲಿ ಬರ್ದ್ ಸಣ್ಣ ಬೋರ್ಡ್. ದೋಣಿ ಚೋಮಂತ ಹೆಸ್ರ್ ಕಾಂಬೊತ್ತಿತ್ತ್. ಚೋಮಂಗೆ ದೋಣಿ ನಡ್ಸುವ ಕೆಲ್ಸ ಆಗಿತ್ತ್. ಹಳ್ಳಿಂದ ಪೇಟೆಗೆ ಹೋಕೆ ಹಳ್ಳ ದಾಟಕಾಗಿತ್ತ್. ಚೋಮ ಶಾಲೆ ಮೆಟ್ಲ್ ಹತ್ತಿದಂವ ಅಲ್ಲದರು ಅವನ ಹೆಸ್ರ್ ಊರಿಡೀ ಹಬ್ಬಿತ್. ಯಾರಿಗಾದ್ರ್ ಉಷಾರ್ ಇಲ್ಲದರೆ ಆಸ್ಪತ್ರೆಗೆ ಹೋಕೆ ಹಳ್ಳ ದಾಟಕಾಯ್ತ್. ಅದ್ಕೆ ಚೋಮನ ದೋಣಿನ ಪಾರಕಾಯಕ್ಕಾಗಿತ್ತ್.

ಈ ಕೆಲ್ಸನ ನಿನ್ನೆ ಮೊನ್ನೆಂದ ಕಲ್ತ್‌ದ್ ಅಲ್ಲ. ಅವನ ಹಿರಿಯವರ ಕಾಲಂದ ನಡ್ಕಂಡ್ ಬಂದ್, ಇದರ್ಲಿ ಸಿಕ್ಕುವ ದುಡ್ಡುಂದ ಇವರ ಜೀವನ ಸಾಗ್‌ತ್ತಿತ್ತ್. ಮುಂದೆ ಚೋಮನ ಪಿಜ್ಜ ಈ ಕೆಲ್ಸಕೆ ಕೈ ಹಾಕಿದ. "ಮಂಜ ಈ ಕೆಲ್ಸನ ಯಾವ ಕಾರಣಕ್ಕೂ ನಿಲ್ಸಿಕೆ ಬೊತ್ತ್. ನಿನ್ನ ಮಕ್ಕ, ಅವರ ಮಕ್ಕ, ಹಿಂಗೆ ಎಲ್ಲವು ಕಲಿವ ಹಂಗೆ ಮಾಡ್. ದುಡ್ಡ್ ಮಾಡುವ ಆಸೆಂದ ದೋಣಿ ನಡ್ಸುದು ಬೇಡ. ದುಡ್ಡು ಇಲ್ಲದ ಬಡವು, ಕಷ್ಟಲಿ ಇರೊವು ನಿನ್ನ ಹಕ್ಕಲೆ ಬಂದರೆ ದೋಣಿ ತೆಗೆಕೆ ಹಿಂದೆ ಮುಂದೆ ನೋಡ್ಬಡ. ಅಂತವು ನಿಂಗೆ ಮಾಡ್ದ ಆರ್ಶೀವಾದನೆ ನಿಮ್ಮ ಪೀಳಿಗೆಗೆ ಒಳ್ಳೆದ್ ಮಾಡ್ದೆ.

ಅಪ್ಪನ ಮಾತ್‌ನಾಂಗೆ ಎಲ್ಲವೂ ನಡ್ಕಂಡ್ ಬಂದ. ಹಿಂಗೆ ಬಂದ್ ಬಂದ್ ಚೋಮಂಗೆ ಸಿಕ್ಕಿತ್.

ಚೋಮ ಸಣ್ಣವ ಆಗಿರ್‌ಕನ ಶಾಲೆಗೆ ಹೋಗುವ ಆಸೆ ತುಂಬಾ ಇತ್ತ್. ಏನ್ ಮಾಡಿಕಾದೆ? ಅವನ ಅಪ್ಪ ಅಮ್ಮಂಗೆ ಏಳ್ ಜನ ಹೆಣ್ಣ್ ಮಕ್ಕ. ಚೋಮ ಕಡೆನ ಗಂಡ್ ಮಂಜ ಆಗಿತ್ತ್.

## ಹೊಸ ಬೊದ್ಕು

ಆ ಹೆಣ್ಣ್ ಮಕ್ಕಳ ಇನ್ನೊಬ್ಬರ ಸೆರ್‍ಗ್‍ಗೆ ಹಾಕಿದೇ ಬಾರಿ ಕಷ್ಟಲಿ. ಮತ್ತೆ ಇವನ ಶಾಲೆಗೆ ಹೆಂಗೆ ಕಳ್ಸುದು. ಒಂದ್ ವೇಳೆ ಶಾಲೆಗೆ ಕಳ್ಸಿ ವಿದ್ಯಾವಂತ ಆದರೆ ದೋಣಿ ನಡ್ಸುವ ಕೆಲ್ಸ ನಿತ್ತ್ ಹೋದೆ. ಹಿರಿಯವರ ಮಾತ್‍ನ ತಪ್ಪಿಕೆ ಆಗದ್‍ಂತ ಹೆದ್ರಿಕೆ. ಚೋಮನ ಅಪ್ಪ ದೋಣಿ ತೆಗೆವ ಹೊತ್ತ್‍ಲಿ ಅವನ ಯಾಗೊಳ್ ಹಳ್ಳದ ಕರೆಗೆ ಕರ್‍ಕಂಡ್ ಹೋಗ್‍ತಿದ್ದ. ಹಿಂಗೆ ಅಪ್ಪನ ಒಟ್ಟಿಗೆ ಮಂಜನು ದೋಣಿ ತೆಗೆಕೆ ಕಲ್ತಿತ್ತ್.

ಚೋಮನ ಹೆಸ್ರ್ ಇಡೀ ಊರು ತುಂಬಾ ಹೊಗಳುವಂಗೆ ಇದ್ದರು, ಇವಂಗೆ ಹೆಣ್ಣ್ ಕೊಡಿಕೆ ಯಾರೂ ಒಪ್ಪುತಿತ್ಲೆ. ಈ ದೋಣಿ ನಡ್ಸಿದ ಕೆಲ್ಸಲಿ ಇವಂಗೆ ಸಿಕ್ಕುದು ಬರೆ ಚಿಲ್ಲರೆ ಪೈಸೆ. ಅಂತವಂಗೆ ನಾವು ಹೆಣ್ಣ್ ಕೊಟ್ಟರೆ ಈ ದುಡ್ಡ್‍ನ ಹಿಂಡ್ಕಂಡ್ ನಮ್ಮ ಮಗಳಿಗೆ ಯಾವ ಸುಖದ ಜೀವನ ಸಿಕ್ಕಿದೆ? ಇವಂಗೆ ಯಾರು ಹೆಣ್ಣ್ ಕೊಡಿಕೆ ಒಪ್ಪುತ್ತಿತ್ಲೆ.

"ಮೂವತ್ತೈದ್, ಮುವತ್ತಾರ್ ವರ್ಷ ಆತ್ ನಂಗೆ ಯಾರೂ ಗೂಡೆ ಕೊಡಿಕೆ ಒಪ್ಪುದ್ಲೆ. ಕಡೆವರೆಗೆ ನನ್ನ ಬಾಳ್ ಒಂಟಿ ಆಗಿರೊಕು." ಚೋಮಂಗೆ ಬೇಜಾರ್ ಇನ್ನೊಂದ್ ಕಡೆಲಿ ಅಪ್ಪ ಶಾಲೆಗೆ ಕಳ್ಸ್‍ದ್.

"ಎಲ್ಲಾ ಮಕ್ಕಳ ಹಂಗೆ ನಾನೂ ಶಾಲೆಗೆ ಹೋಗಿದ್ದರೆ! ಹೊರಗೆ ಹೋಗಿ ದುಡ್ಡ್ ಬೇಕಾದಷ್ಟ್ ಸಂಪಾದನೆ ಮಾಡಿಕಂಡ್ ಎಲ್ಲವರ ಹಂಗೆ ಇರ್‍ತಿದ್ದೆ. ಇಂತ ಕೆಲ್ಸ ನಂಗೆ ಬೇಡಾಯ್ತ್. ಜನಗಳ ಸಾಲ್ ಹಳ್ಳದ ಕರೆಲಿ ಇರ್‍ತಿತ್ತ್ ಹೊರ್‍ತ್ ದುಡ್ಡ್ ಮಾತ್ರ ಐವತ್ತ್, ನೂರು ದಾಟುದ್ಲೆ.

ನಮ್ಮ ಅಪ್ಪ  ಅಜ್ಜ ಪಿಜ್ಜನವರ ಕಾಲಂದ ನಡ್ಸಿಕಂಡ್ ಬಂದ ಈ ಕೆಲ್ಸ ಯಾರಿಗೂ ಇಷ್ಟರವರೆಗೆ ಬೇನೆ ಮಾಡಿತ್ಲೆ. ದುಡ್ಡ್ ಮಾಡಿಕೆ ಆಗದ್‍ಂತ ಹಿರಿಯವು ಹೇಳಿರೆ ಕುಸಿಲಿ ಊಟ ಮಾಡಿಕೆ ದುಡ್ಡು ಬೇಕಲಾ! ನನ್ನ ಹೆಣ್ಣಾಗಿ ಬರುವ ಗೂಡೆ, ಅಮ್ಮ ನಾನು ಮೂರು ಜನರ ಹೊಟ್ಟೆ ತುಂಬುವಷ್ಟಾದ್ರ್ ಸಂಪಾದನೆ ಆಕಲ." ಬಾಯ್ ಬುಟ್ಟ್ ಇಷ್ಟ್ ದುಡ್ಡ್‍ಂತ ಕೇಳ್‍ತಿತ್ಲೆ ಚೋಮ. ಒಂದೊಂದ್ ದಿನ ದೋಣಿಗೆ ಗಿರಾಕಿಗಳೇ ಇಲ್ಲದ ದಿನ ಇತ್ತ್. ಅಂದ್ ಚೋಮಂಗೆ ಬೇಜಾರಾಗಿ "ಅಮ್ಮಾ ಈ ಕೆಲ್ಸ ನಂಗೆ ಬೇಡ ನಾ ಬುಟ್ಟನೆ. ಬೇರೆ ಕೆಲ್ಸಕೆ ಹೋದೆ ಒಳ್ಳೆದ್. ಈ ಕೆಲ್ಸಲಿ ಬರುವ ದುಡ್ಡುಂದ ನಾವ್ಗೆ ನೆಮ್ಮದಿನ ಜೀವನ ನಡ್ಸಿಕೆ ಸಾಧ್ಯ ಇಲ್ಲೆ." ಅಮ್ಮಂಗೆ ಮಂಜನ ಮಾತ್ ಕೇಳಿ ಹೆದ್ರಿ "ಮಂಜಾ, ಇದ್ ನಿನ್ನ ಹಿರಿಯರ ಕಾಲ್‍ಂದೊಳ್ ನಡ್‍ಕಂಡ್ ಬಂದ ಕೆಲ್ಸ ಇದ್ ಅಜ್ಜ, ಅವರಪ್ಪ, ನಿನ್ನ ಅಪ್ಪ ಇವೆಲ್ಲ ಬಾರಿ ಕುಸಿಲಿ ಈ ಕೆಲ್ಸನ ನಡ್ಸಿಕಂಡ್ ಬರ್‍ತಿದ್ದ.  ದುಡ್ಡು ಮಾಡ್ದಕ್ಕಿಂತ ಬಂದ ಜನಗಳ ಒಂದು ಊರುಂದ ಒಂದು ಊರಿಗೆ ಎತ್ತ್‍ಸುವ ಒಂದ್ ಉಪಕಾರ. ಆಗ ಅವು ಪಡುವ ಕುಸಿನೆ ಅವ್ಕೆ ಆದಾಯ ಆಗ್ತಿತ್ತ್. ಜನ್ಮ ಕೊಟ್ಟ ಆ ದೇವ್ರು ನಮ್ಮ ಕಾಪಾಡ್ದೆಂತಅವ್ಕೆ ನಂಬಿಕೆ ಇತ್ತ್.

ಮಂಜ ಆ ನಂಬಿಕೆ ಇನ್ನ್ ಮುಂದೆಗೂ ಆ ನಂಬಿಕೆನ ಹಂಗೆನೆ ಒಳ್ಸಿಕಂಡ್ ಇದರ ನಿಲ್ಲುದ್ ಬೇಡ.

ಇದರ ಸುರು ಮಾಡ್ದ ಹಿರಿಯವು, ಇದ್ ನಿತ್ತ್ ಹೋಕೆ ಆಗದ್. ದುಡ್ಡುಗಾಗಿ ಅಲ್ಲ. ಏನಾರ್ ಕಾಯಿಲೆ, ಕಸ ಬಂದ್ ಬೇನೆಂದ ನರ್‌ಲಿಕಂಡ್ ಇದ್ದವರ ಸರಿಯಾದ ಹೊತ್ತ್‌ಲಿ ಮದ್ದಿಗೆ ಕರ್ಕ್ಂಡ್ ಹೋಕೆ ಹಳ್ಳ ದಾಟ್ಸಿಕೆ ನಿನ್ನನ್ನೆ ನಂಬಿ ಬಂದವೆ ಅಂಥವುಕೆ ನೀ ಮಾಡುವ ಉಪಕಾರ. ಇದ್ ಬರೇ ದೋಣಿ ಅಲ್ಲ, ಅಂಬಿಗನ ಸಣ್ಣ ದೋಣಿ. ಅವರ ಮನ್ಸ್‌ಲಿ ಇದ್ದ ದುಡ್ಡು ನಮ್ಮ ಮೈ ಮುಚ್ಚಿಕೆ ಬೇಕಾದ ಬಟ್ಟೆಗೆ ತಿಂಬಕೆ ತಳಿ, ಗಂಜಿಗೆ ಸಾಕ್ ಮಂಜ. ಅದರ್‌ಂದ ಹೆಚ್ಚ್ ಸಂಪಾದನೆ ಮಾಡ್ರೆ ಅದ್ ನಾವ್ಗೆ ಎತ್ತಿಕಿಲೆ. ಮೊನ್ಸ ಇದ್ದದರಲ್ಲಿ ಕುಸಿ ಪಟ್ಟ್‌ಕಣಕು. ಯಾಗೋಳ್ ಮೊನ್ಸ್‌ಂಗೆ ಆಸೆ ಅತಿ ಆಕೆ ಆಗದ್. ಎಷ್ಟ್ ಜನ ನಿನ್ನನೆ ನಂಬಿಕಂಡ್ ಒಳ. ದುಡ್ಡುನ ಆಸೆಗೆ ಕೆಲ್ಸ ನಿಲ್ಸುದು ಬೇಡ ಮಂಜ."

"ಅಮ್ಮ ನೀ ಹೇಳ್ದಲ್ಲ ಸರಿ ನನ್ನ ಸಂಬಳನ ನೆನ್ಸಿರೆ ನಂಗೆ ಯಾರೂ ಹೆಣ್ಣ್ ಕೊಡ್ದುಲೆ. ನಾ ಸಾಯುವರೆಗು ಒಂಟಿ ಆಗಿ ಇರುವ ಪರಿಸ್ಥಿತಿ."

"ಮುಂದೆ ನಿನ್ನ ಅಪ್ಪ ನನ್ನ ಮೊದ್ವೆ ಆಕನ ಅವ್ಕೆ ನಲ್ವತ್ತ್ ವರ್ಷ ಆಗಿತ್ತ್. ಅವ್ಕೆ ದೇವರ ಮೇಲೆ ನಂಬಿಕೆ ಇತ್ತ್. ನೀನು ಕೂಡ ದೇವರ ಮೇಲೆ ನಂಬಿಕೆ ಇಸಿ ಇದೆ ಕೆಲ್ಸನ ಮಾಡ್. ಇಂದಲ್ಲ ನಾಳೆ ಆದ್ರ್ ನಿನ್ನ ಯೋಗ್ಯತೆಗೆ ತಕ್ಕ ಗೂಡೆ ಸಿಕ್ಕುದು." ಮಂಜಂಗೆ ಸಮದಾನ ಮಾಡ್ದ. ಅಮ್ಮ ಹೇಳ್ದ ಮಾತ್‌ನ ನಂಬಿ ದೇವರ ನಂಬಿಕಂಡ್ ಮಾಮೂಲಿನ ಹಂಗೆ ಕೆಲ್ಸ ಸುರು ಮಾಡ್ತ್.

ಸೂರ್ಯ ಹುಟ್ಟ್‌ಕನ ಹಳ್ಳದ ಕರೆಲಿ ಕುದ್ದರೆ, ಸೂರ್ಯ ಕಂತ್‌ಕನ ಮುಟ್ಟ ದೋಣಿ ತೆಗೆತಿತ್ತ್.

ಚೋಮನ ಅಮ್ಮಂಗೆ ಅವನ ಬಗ್ಗೆ ತುಂಬಾ ಬೇಜಾರ್ "ಮಂಜಂಗೆ ಮೊದ್ವೆ ಆಗುವ ವರ್ಷ ಕಳ್ತ್. ಯಾರು  ಹೆಣ್ಣು ಕೊಡಿಕೆ ಒಪ್ಪುದ್ಲೆ. ಸೊಸೆ ಬರದೆ ಪುಳ್ಳಿಕಳ ನೋಡದೆ ಸತ್ತನೆ" ಂತ ಅವಳ ಒಳಗೆ ಇದ್ದ ಬೇಜಾರ್‌ನ ಮಂಜಂಗೆ ತೋರ್ಸುದ್ಲೆ.

"ಓ ದೇವ್ರೆ ನಂಗೊಂದು ಸೊಸೆ ಸಿಕ್ಕುವ ಹಂಗೆ ಮಾಡ್, ನಮ್ಮ ವಂಶನ ಬೆಳಗುವ ಹಂಗೆ ಮಾಡ್."

ದೇವರೊಟ್ಟಿಗೆ ಬೇಡಿಕಣ್ಣ್‌ತಿದ್ದ. ಅಂದೊಂದು ದಿನ ಜೋರು ಗುಡ್ಗು, ಸಿಡ್ಲ್‌ನ ಆರ್ಭಟೆ ಜೋರಾಗಿತ್ತ್. ಹಳ್ಳ ತುಂಬಿ ಹರಿತಿತ್ತ್. ಚೋಮ ಅವನ ಕೆಲ್ಸ ಮುಗ್ಸಿ ಮನೆಗೆ ಹೋಗುವ ಹೊತ್ತ್‌ಲಿ ಹೆಂಗ್‌ಸ್‌ನ ಬೊಬ್ಬೆ ಅವನ ಕೆಬಿಗೆ ಬೀತ್. ಚೋಮ ತಿರ್‌ಗಿ ನೋಡ್‌ಕನ ಮೂರ್, ನಾಲ್ಕ್ ಜನ ಹೆಣ ಹೊತ್ತ್‌ಕಂಡ್ ಬಂದಾಂಗೆ ಬರ್‌ತ್ತಿದ್ದ.

"ಚೋಮಾ. .... ಒಮ್ಮೆ ದಾಟ್ಸಿಕೊಡು, ನನ್ನ ಗಂಡನ ಬೊದ್ಕುಸುವ ಹಂಗೆ ಮಾಡ್‌ಂತ" ಬೊಬ್ಬೆ ಹಾಕಿತ್ತ್. ಚೋಮಂಗೆ ದೋಣಿ ತೆಗೆಕೆ ಹಂಞ ಧೈರ್ಯ ಕಮ್ಮಿ ಆಗಿತ್ತ್. ತುಂಬಿ ಹರೆತಿದ್ದ ನೀರ್, ಇಳಿಯಕೆ ಪಾರ ಕಾಯ್‌ವ ಹೊತ್ತಲಿ ಅವಳ ಗಂಡನ ಉಸಿರ್ ನಿತ್ತ್ ಹೋಗಿತ್ತ್. ಅವಳ ಗಂಡಂಗೆ ಸಿಡ್ಲ್ ಹೊಡ್ದ್ ಆಗಳೆ ಒಂದ್ ಗಂಟೆಂದ ಮೇಲೆ ಆಗಿತ್ತ್.

ಪಾಪ ಈ ಹೆಂಗ್‌ಸ್‌ಗೆ ಯಾರೂ ಇಲ್ಲೆಂತ. ಹೆಣ ಮನೆಗೆ ತಕಂಡ್ ಹೋಕನ ಮಯ ಮಯ ಕತ್ತಲೆ ಆಗಿತ್ತ್. ಚೋಮನೂ ಅವರ ಹಿಂದೆ ಹೆಜ್ಜೆ ಹಾಕಿತ್. ಹೆಣ ತಕಂಡ್ ಹೋಕನ ಅವಳ ಮನೆ ಜಾಲ್‌ಲಿ ಒಂದಷ್ಟ್ ಜನ ಸೇರಿದ್ದ. ಒಳಗೆಂದ ಅಪ್ಪಾ. . . . . ಅಪ್ಪಾಂತ ಹೆಣ್ಣ್ ಸ್ವರ ಕೇಳ್ತಿತ್ತ್. ಹೆಣ್ಣ್ ಮಗಳ ಸ್ವರ ಕೇಳಿ ಚೋಮನ ಹೃದಯ ಕರ್‌ಗಿ ನೀರಾತ್. ಕಣ್ಣ್‌ಂದ ನೀರ್ ಹನ್ಕ್‌ತಿತ್ತ್.

ತೀರಿ ಹೋದ ಗಂಡಸೇ ಈ ಹೆಣ್ಣ್‌ಗೆ, ಮಗಳಿಗೆ ಆಧಾರ ಆಗಿರೋಕು. ಇವನ ಸಂಪಾದನೆನ ನಂಬಿಕಂಡ್ ಇದ್ದ ಇವರ ಮುಂದಿನ ಗತಿ ಏನ್? "ಪಾಪ ದೋಣಿ ದಾಟ್ಸಿಕೆ ಆಗಿದ್ದರೆ ಜೀವ ಒಳೆತಿತ್ತೋ ಏನೋ" ಚೋಮಂಗೆ ಅಲ್ಲಿಂದ ಒಮ್ಮೆಗೆ ಹೋಕೆ ಆಗದೆ ಹಂಞ ಹೊತ್ತ್ ಅಲ್ಲೆ ನಿತ್ತಿತ್ತ್. ಇವು ಇರುವ ಮನೆ ಬೇರೆವು ನಿಲ್ಲಿಕೆ ತಕ್ಕ ಕೊಟ್ಟ ಮನೆ. ಅವರ್ದೆ ಸೊಂತ ಮನೆ ಅಲ್ಲಂತ ಗೊತ್ತಾಗಿತ್ತ್ ಚೋಮಂಗೆ. ಅಂದ್ ದುಡ್ದ ಒಂದು ದಿನದ ಸಂಬಳನ ಆ ಹೆಂಗ್‌ಸ್‌ನ ಕೈಲಿ ಕೊಟ್ಟ್ ಅವನ ಮನೆಗೆ ಹೋಗಿ ಅಲ್ಲಿ ನಡ್ದ ಸಂಗತಿಗಳ ಅವನ ಅಮ್ಮನ ಒಟ್ಟಿಗೆ ಹೇಳ್ತ್ . ಈ ಕಥೆ ನಡ್ದ್ ಸುಮಾರ್ ಎರಡ್ ಮೂರ್ ತಿಂಗ ಆಕನ ಚೋಮ ದೋಣಿ ಕೆಲ್ಸ ಮುಗ್ಸಿ ಮನೆಗೆ  ಹೋಗುವ ಹೊತ್ತ್‌ಲಿ ಅವನ ಅಮ್ಮನ ಒಟ್ಟಿಗೆ ಮಾತಾಡ್‌ತಿದ್ದ ಸ್ವರ ಕೇಳಿತ್ತ್. ಜಾಲ್ ತಲೇಲಿ ಬರ್ತಿದ್ದ ಚೋಮಂಗೆ ಬಾಗಲ್ ಹಕ್ಕಲೆ ಒಂದು  ಹೆಂಗ್‌ಸ್, ಮತ್ತೊಂದು ಗೂಡೆ, ಒಟ್ಟಿಗೆ ಬಟ್ಟೆ ಬೊರಿಗಳ ಗಂಟ್ ಮಾರಾಪು ಹಿಡ್ಕಂಡ್ ನಿತ್ತ್‌ಕಂಡ್ ಇದ್ದದ್ ಕಂಡ್ ಅಂದ್ ನಡ್ದ ಕಥೆ ಇವರ ಮನೆಲಿಂತ ನೆನ್‌ಪಾಗಿ ಅವರ ಮಾತಾಡ್ಸಿ ಸೀದಾ ಮನೆ ಒಳಗೆ ಹೋತ್ ಚೋಮ.

ಚೋಮನ ಒಟ್ಟಿಗೆ ಅವನ ಅಮ್ಮ ಹಿಂದೆಂದ ಹೋದ. ಮಂಜಂಗೆ ವಿಷಯ ತಿಳ್ಸಿದ.

"ಮಂಜ ಅವು ನಮ್ಮಲಿ ನಿಲ್ಲಿಕೆ ಜಾಗ ಕೇಳ್ತ ಒಳ ಇಷ್ಟರವರೆಗೆ ಅವು ಇದ್ದ ಮನೆನ ಆ ಧನಿ ಬೇರೆವ್ಕೆ ಮಾರ್ದ. ಈಗ ಇವ್ಕೆ ನಿಲ್ಲಿಕೆ ಜಾಗೆ ಇಲ್ಲೆ"ಂತ

"ನೀವು ಹೇಳ್ದ್ ಸರಿ ಅಮ್ಮಾ ಅಂದರೆ ನಮ್ಮ ಮನೆಲಿ ಒಳಿಯಕೆ ಹೇಳಿರೆನಾ!" ಇರ್‌ಲಿ ಮಂಜ ಅವ್ಕೆ ಅವರ ಸಂಬಂಧದವು ಯಾರೂ ಇಲ್ಲೆ. ಇಂತವರ ನಿಲ್ಸಿಕಂಡರೆ ದೇವ್ರು ನಾವ್ಗೆ ಯಾಗಾರ್ ಒಂದ್ ದಿನ ಒಳ್ಳೆದ್ ಮಾಡ್ದೆ."

"ಹೌದು ನಾವು ಬೊದ್ಕುದು ಕಷ್ಟಲಿ ಅದರ ಎಡೆಲಿ ಇವು ನಮ್ಮೊಟ್ಟಿಗೆ ಇದ್ದರೆ ಮತ್ತಷ್ಟ್ ಕಷ್ಟ ಜಾಸ್ತಿನೆ."

ಇಲ್ಲಿ ಇರ್ದು ಬೇಡ ಎಲ್ಲಿಗಾದ್ರ್ ಹೋಗಿಂತ ಹೇಳಿರೆ ಅವು ಹಾಕಿದ ಕಣ್ಣೀರ್‌ನ ಶಾಪ ನಾವ್ಗೆ ತಟ್ಟುದುಂತ. ಯೋಚ್ನೆ ಮಾಡಿ ಸುಮ್ಮನೆ ಆತ್ ಚೋಮ.

"ಮಂಜ... ನೀ ಆ ಗೂಡೆನ ನೋಡ್ದನ? ಬಾರೀ . . . ಪೊರ್ಲು, ಲಕ್ಷಣ, ಒಳ್ಳೆ ಗುಣ, ನಡ್ತೆ ಇದ್ದವಳಾಂಗೆ ಉಟ್ಟು ನಿಂಗೆ ಅವಳ ಮೊದ್ವೆ ಮಾಡ್ಸಿರೆ ಹೆಂಗೆ?"

ಅಮ್ಮನ ಮಾತ್ ಕೇಳ್ದ ಚೋಮಂಗೆ  ಅಚ್ಚರಿ! ಆತ್ "ನಾ ಆ ಗೂಡೆನ ನೋಡಿ ಅಂತ

ಯೋಚ್ನೆ ಮಾಡ್‌ತ್ಲೆ ಅಮ್ಮ ಹೇಳ್ದಾಂಗೆ ಲಕ್ಷಣ ಆಗಿ ಉಟ್ಟು. ನಾ ಯಾಕೆ ಅವಳ ಮೊದ್ವೆ ಆಕೆ ಆಗದ್? ನನ್ನ ಪ್ರಾಯ ನೋಡಿ ಒಪ್ಪುದಾ?"

ಮಂಜ ಆ ಕೆಲ್ಸ ನನ್ನದ್."

ಹೆಂಗ್‌ಸ್‌ನ ಕೈ ಹಿಡ್ದ್ "ನಿಮ್ಮ ಮಗಳ್‌ನ ನನ್ನ ಸೊಸೆ ಆಗಿ ಮಾಡಿ ಕೊಟ್ಟರೆನಾ?"

ನಿಲ್ಲಿಕೆ ಜಾಗೆ ಕೊಡದೆ ಎಲ್ಲಿಗೆ ಕಳ್ಸುವೆಂತ ಯೋಚ್ನೆಲಿದ್ದ ಆ ಹೆಂಗ್‌ಸ್ "ಗತಿ ಇಲ್ಲದೆ ಬೇಡಿಕಂಡ್ ಬಂದ ನನ್ನ ಮಗಳ ನಿಮ್ಮ ಸೊಸೆ ಆಗಿ ಮಾಡಿಕಣಕುತ ಯೋಚ್ನೆ ಮಾಡ್ರೆ ನಾ ಯಾವ ಬಾಯಿಲಿ ಇಲ್ಲೆಂತ ಹೇಳ್ದು? ಇದ್ಕೆಂದ ದೊಡ್ಡ ಭಾಗ್ಯ ಇನ್ನೆಲ್ಲಿಟು" ಹೆಂಗ್‌ಸ್ ಮಗಳ ಕೊಡಿಕೆ ಒಪ್ಪಿಕಂಡ್‌ತ್.

ಚೋಮ, ಚೆನಿಯಾರ್‌ನ ಮದ್ವೆ ನಡ್ದ್ ಹೋತ್. ಚನಿಯಾರು ಅವನ ಹೆಣ್ಣಾಗಿ ಬಂದ ಮೇಲೆ ಅವನ ಜೀವನವೇ ಬೇರೆ ಆತ್.

ಮದುವೆ ಆಗುವ ಭಾಗ್ಯನೇ ಇಲ್ಲೆಂತ ನೆನ್ಸಿತ್. ಈಗ ನೆನ್ಸದೆ ಅವನ ಮದುವೆ ಆತ್. ಹೆಣ್ಣ್‌ನ ತುಂಬಾ ಲಾಯ್ಕಲಿ ನೋಡಿಕಂಡ್ ಪ್ರೀತಿಲಿ ಸಾಂಕ್‌ತ್ತಿತ್ತ್. ಚನಿಯಾರು ಗಂಡನ ಪ್ರಾಯನ ಕೇತ್ಲೆ. ಅಮ್ಮ, ಮಗಳಿಗೆ ಹೊಸ ಬೊದ್ಕ್‌ನ ಕೊಟ್ಟ ಗಂಡ, ಅತ್ತೆನ ಲಾಯ್ಕಲಿ ನೋಡಿಕಂಡ್ ಅತ್ತೆಗೆ ತಕ್ಕ ಸೊಸೆ ಆಗಿ, ಗಂಡಂಗೆ ತಕ್ಕ ಹೆಣ್ಣಾಗಿ, ಅತ್ತೆಗೆ ಒಂದ್ ಕೆಲ್ಸ ಕೊಡದೆ ಅವಳೇ ಎಲ್ಲಾ ಕೆಲ್ಸಗಳ ಮಾಡ್ತಿತ್ತ್. ಮಂಜಂಗೆ ಹೆಣ್ಣ್ ಸಿಕ್ಕಿತ್. ಹಳೆ ತಲೆಮಾರ್‌ಂದ ನಡ್ಕಂಡ್ ಬಂದ ಕೆಲ್ಸ ಕಾಲ ಕಾಲಕ್ಕೂ ನಿತ್ತ್ ಹೋಗದೆ ಆ ದೇವ್ರು ಕಾಪಡ್ರೆ ಸಾಕ್‌ಂತ" ಮನ್ಸ್‌ಲಿ ಕುಸಿ ಪಟ್ಟ ಚೋಮನ ಅಮ್ಮ.ಮೊದ್ವೆ ಆಗಿ ಒಂದು ತಿಂಗ ಆಕನ ಚೆನಿಯಾರು ಗರ್ಭಿಣಿ ಆದ್ ಗೊತ್ತಾದ ಚೋಮಂಗೆ ಸ್ವರ್ಗ ಸಿಕ್ಕಿದಾಂಗೆ ಆತ್. ಇದ್ದ ದುಡ್ಡುಲಿ ಹೆಣ್ಣ್ ಅತ್ತೆ, ಅಮ್ಮನ ಪೊರ್ಲುಲಿ ಸಾಂಕ್‌ತಿತ್ತ್.

ಗರ್ಭಿಣಿ ಆದ ಹೆಣ್ಣ್‌ನ ಮೇಲೆ ಮತ್ತಷ್ಟೂ ಪ್ರೀತಿ ಹೆಚ್ಚಾಗಿ ಕೂಸು ಬೆಳೆಕೆ ಬೇಕಾದ ಮೊದ್ದುಗಳ ತಂದ್ ಕೊಡ್‌ತ್ತಿತ್ತ್. ಚನಿಯಾರುನ ಅಮ್ಮ ಅತ್ತೆಗೆ ಕುಸಿ ಆಗಿ ಸೊಸೆನ ಪೊರ್ಲುಲಿ ನೋಡಿಕಂಡ್ ಯಾವ ಕೆಲ್ಸ ಅವಳಿಗೆ ಕೊಡ್ತಿತ್ಲೆ. ಇವರ ಪ್ರೀತಿ ವಾತ್ಸಲ್ಯನ ಕಂಡ್ ಚೆನಿಯಾರುನ ಹೃದಯ ತುಂಬಿ ಬಾತ್. ಅವೆಲ್ಲ ಕೂಸುನ ಕಾಣುವ ಕನ್ಸ್‌ನ ಕಾಂಬೊತ್ತಿದ್ದ. ದಿನ ಹೋದೇ ಗೊತ್ತಾತ್ಲೆ. ಒಂಭತ್ತ್ ತಿಂಗ ತುಂಬಿ ಬಾಕನ ಹೆಣ್ಣ್‌ನ ಕಣ್ಣ್‌ಲಿ ಕಣ್ಣಿಟ್ಟ್ ನೋಡ್ತಿತ್ತ್ ಚೋಮ.

ಪೊರ್ಲುಲಿ ಹೆರಿಗೆ ಆಗಿ ಕೂಸುನ ಕೈಲಿ ಆಡ್ಸಿ, ಬೆಳ್ಸಿ ಸಂಸಾರ ಉದ್ದಾರ ಆಗುವ ಹಂಗೆ ಮಾಡಿಕೆ ದೇವರೊಟ್ಟಿಗೆ ಬೇಡ್ತ್ ಚೋಮ. ಹೆರಿಗೆ ದಿನ ಬಾತ್. ಚನಿಯಾರುಗೆ ಹೊಟ್ಟೆ ಬೇನೆ ಸುರು ಆತ್. ಹೊಸ ಜೀವ ಯಾಗ ನೆಲಕ್ಕೆ ಬಿದ್ದದೆ! ನಮ್ಮ ವಂಶ ಬೆಳ್ಗುವ ಕೂಸು ಗರ್ಭದ ಒಳೆಗೆಂದ ಎಷ್ಟ್ ಹೊತ್ತಿಗೆ ಬಂದದೆ"ಂತ ಆಸೆಂದ ಕುದ್ದಿದ್ದ. ಹೊಟ್ಟೆ ಬೇನೆ ಜೋರ್ ಆತ್. ಅವಳ ಬೊಬ್ಬೆ ಕೇಳಿಕಾಗದೆ ಚೋಮನ ಕೈಕಾಲ್ ನಡ್ಗಿಕೆ ಸುರು ಆತ್.

## ಹೊಸ ಬೊದ್ಕು

ಒಂದ್ ಕಡೆ ಕಣ್ಣ್‌ಂದ್ ನೀರ್ ಜಾರ್‌ತ್ತಿತ್ತ್.

ಆದರೆ ವಿಧಿ ಆಟ ಬೇರೆ ಆತ್. ಹೊಟ್ಟೆ ಒಳಗೆ ಕೂಸು ಸತ್ತ್ ಹೋಗಿತ್ತ್. ಹೊಕ್ಕುಳ ಬಳ್ಳಿ ಕೂಸುನ ಗಂಟ್ಲ್‌ಗೆ ಸುತ್ತಿ ಹಾಕಿತ್, ರಕ್ತ ಜಾಸ್ತಿ ಹೋಕೆ ಸುರು ಆತ್. ಅವನ ಅಮ್ಮಂಗೆ ಹೆದ್ರಿಕೆ ಆತ್. "ಮಂಜ ಹೊಟ್ಟೆ ಬೇನೆ ಜಾಸ್ತಿ ಆಗ್ತ್‌ಟ್ಟು ಹೆರಿಗೆಗೆ ಕಷ್ಟ ಆದೆ, ಜೀವಕೆ ಅಪಾಯ ಬಂದದೆ. ಆಸ್ಪತ್ರೆಗೆ ಕರ್ಕ್ಂಡು ಹೋಕೆ ವ್ಯವಸ್ಥೆ ಮಾಡ್" ಮಂಜನ ಕರ್ದ್ ಹೇಳ್ದ. ಚೋಮ ದೋಣಿ ನಡ್ಸಿಕೆ ಮುಂದೆ ದೇವರ ಮೇಲೆ ಬಾರ ಹಾಕಿ ದೋಣಿ ನಡ್ಸಿತ್. ಯಮ ಎಲ್ಲಿ ಕಾದ್ ಕುದ್ದಿತೋ ಏನೊಂತ ಗೊತ್ತಾತ್ಲೆ ದೋಣಿ ನಡ್ಸಿಕಂಡ್ ಇದ್ದಾಂಗೆ ಒಮ್ಮಂದ ಒಮ್ಮಗೆ ದೋಣಿ ಮೊಗ್ಚಿ ಹೋಗಿ ಚನಿಯಾರ್ ನೀರ್‌ಲಿ ಮುಳ್ಗಿ ಹೋತ್. ಅವಳ ಜೀವಕ್ಕಾಗಿ ನೀರ್‌ಲಿ ಹರ ಸಾಹಸ ಮಾಡಿರೆ, ಸಿಕ್ಕಿದ್! ಪ್ರಾಣ ಹಾರಿ ಹೋದ ಅವಳ ಬರೇ ಕುದೆ ಮಾತ್ರ. ಸಂಸಾರ ಬೆಳ್ಗಿ ಕೂಸುನ ಹಿಡಿವ ಕೈಗೆ ಸಿಕ್ಕಿದ್ ನೀರ್‌ಲಿ ತೇಲ್ದ ಅವಳ ಶರೀರ ಮಾತ್ರ. ಅವಳ ಹೆಣನ ನೋಡ್ದ ಚೋಮ ನಿತ್ತಲ್ಲಿ ಕಲ್ಲ್ ಆಗಿ ಹೋಗಿತ್ತ್. ಅವಳ ಜೀವ ಮೌನ ಆಗಿತ್ತ್. ಒಂದ್ ವರ್ಷಲಿ ಹೆಣ್ಣ್‌ನ ಒಟ್ಟಿಗೆ ನಡ್ಸಿದ ಜೀವ ಮತ್ತೆ ಒಂಟಿ ಆತ್. "ಇಷ್ಟ್ ಬೇಗ ನನ್ನಂದ ದೂರ ಮಾಡ್ದ. ದೇವ್ರೆ ಯಾಕೆ ಹಿಂಗೆ ಆತ್? ನಂಗ್ಯಾಕೆ ಇಂಥ ಕಷ್ಟನ ತಂದ್ ಕೊಟ್ಟ." ಹೊತ್ತ್ ಮುಳ್ಗಿ ಕತ್ತಲಾಕನ ಚೋಮ ಹೊರಗೆ ಬಂದ್ ನೋಡ್‌ಕನ, ಮರದ ಗೆಲ್ಲ್‌ಲಿ ತೂಗಿ ಹಾಕಿದ ರಟ್ಟ್‌ನ ಬೋರ್ಡ್ ನಗಾಡ್ದಂಗೆ ಇವನ ಕಣ್ಣ್‌ಗೆ ಕಂಡತ್ತ್. "ಹಿರಿ ತಲೆಮಾರ್‌ಂದ ನಡ್ಸಿಕಂಡ್ ಬಂದ ದೋಣಿಲಿ ಎಷ್ಟೋ ಜನರ ಊರ್‌ಂದ ಊರ್‌ಗೆ ಸಾಗಿಸಿ ನಮ್ಮ ಸೊಸೆನ ದಾಟ್ಸಿಕೆ ಆಗದೆ ಜೀವ ಕಳ್ಕಂಬಂಗೆ ಆತ್" ಮೋರೆ ಮೋರೆ ನೋಡಿಕಂಡ್ ತಲೆಗೆ ಕೈ ಹೊತ್ತ್ ಕುದ್ದ ಅವನ ಅಮ್ಮ, ಚನಿಯಾರ್‌ನ ಅಮ್ಮ ಮರ್ಡ್‌ತ್ತಿದ್ದ.

ಚೋಮನ ತಲೆ ಗಿರ ಗಿರ ತಿರ್‌ಗಿತ್. ಮನೆ ಹಿಂದೆ ಗೊಡೆಗೆ ಒರ್ಗಿಸಿಕಂಡ್ ಇದ್ದ ಕೊಡ್ಲಿ ತಕಂಡ್ ಹೋಗಿ ದೋಣಿನ ತುಂಡ್ ತುಂಡ್ ಮಾಡಿ "ನನ್ನ ಹೆಣ್ಣ್, ಕೂಸುನ, ಬೊಲಿ ತೆಗ್ದ ಮೇಲೆ ಇನ್ನ್ ಇಂತ ಕೆಲ್ಸ ಬೇಡ" ಬೋರ್ಡ್‌ನ ಹಳ್ಳಕೆ ತೆಗ್ದ್ ಹಾಕಿ ನೀರ್‌ಲಿ ತೇಲಿಕಂಡ್ ಹೋಗುವ ಪೊರ್ಲುನ ಹುಚ್ಚನಾಂಗೆ ನಿತ್ತ್ ನೋಡ್ತಿತ್ ಚೋಮ.

* * * * * *

# ಕಪ್ಪಾದರೆ ನಂಗೆ ಕಸ್ತೂರಿ

ನಾ ಅಂದ್ ಕಾಲೇಜ್‌ಗೆ ಗುಡ್‌ಬೈ ಹೇಳಿದ್ದೆ. ಸಮಯ ಕಳಿಯಕೆ–ಂತ ಮೊಬೈಲ್ ಹಿಡಿವ ಹುಚ್ಚಿಲಿ ಸ್ಕ್ರೀನ್ ಟಚ್ಚ್ ತಕಂಡೆ. ಅದರ ಬೆಲೆ ಎಷ್ಟ್–ಂತ ನಂಗೆ ಗೊತ್ತುಟು. ನೀವೇನ್ ತಲೆ ಬಿಸಿ ಮಾಡ್ದು ಬೇಡ. ಅದ್ಕೆ ಒಂದ್ ಮಿಸ್ ಕಾಲ್ ಬಂದಿತ್ತ್. ನಾ ಅದರ ತೆಗ್ದ್ ನೋಡಿರೆ ನೋ ನೇಮ್ ಅಂತ ತೋರ್‍ಸ್ತಿತ್ತ್. ಏನೋ ಒಂದ್ ಆಸೆಂದ ನಾನು ಅದ್ಕೆ ಮಿಸ್ ಕಾಲ್ ಮಾಡ್ದೆ–ಂತ ತಿಳ್ಕಣಿ.ಮೊಬೈಲ್ ಲಾಕ್ ಬೀಳಿಕೆ ಮುಂದೆ ಹಾಯ್–ಂತ ಮೆಸೇಜ್ ಬಾತ್. ನನ್ನ ಮನ್ಸಿಗೆ ಆತ್ ನಾ ಯಾಕೆ ಕಮ್ಮಿ ಆದು–ಂತ ಮೆಸೇಜ್ ಮಾಡಿಕೆ ಹೋಗದೇ ಮಿಸ್ ಕಾಲ್ ಕೊಟ್ಟ್, ಮಿಸ್ ಕಾಲ್ ರಾಜ ಆದೆ. ಅಂತೂ ಇಂತೂ ಫೇಸ್ ಬುಕ್ ಓಪನ್ ಮಾಡುವ ಹಂಗೆ ಆತ್. ಅಂತದರ್‍ಲಿ ತಪ್ಪೇನ್ ಇಲ್ಲೆ ಬುಡಿ. ನಾವು ಹಾಕ್ಸಿಕಂಡ ಪೋಟಗ ಮೊಬೈಲ್‌ನ ಒಳಗೆ ಸೇರಿಕಂಡ್ ತಲೆ ಒಳಗೆ ಹುಳ ಹೊಕ್ಕಂಗೆ ಆತ್. ಏನ್ ಪಾಪನೋ, ಪುಣ್ಯನೋ ನನ್ನ ಅಪ್ಪ ತೀರಿ ಹೋಗಿ ಬರ್ತಿ ಒಂದ್ ವರ್ಷ ಆತ್. ಅದ್ಕೆ ಏನೋ ಈ ಪುಣ್ಯಾತ್ಮಿಗಿತ್ತಿ ನಂಗೆ ಸಿಕ್ಕಿದ್ ಕಂಡದೆ. ಮೊದವೆ ಸುದ್ದಿ ನಮ್ಮ ಹಕ್ಕಲೆ ಮನೆನ ಅಜ್ಜಿ ಬಾಯಲಿ ಬಾತ್. ಹಂಗೆ, ಹಿಂಗೆ–ಂತ ಹೇಳಿ ನಮ್ಮ ಮೊದುವೆ ಆತ್–ಂತ ತಿಳ್ಕಣಿ. ಅಲ್ಲ ನಾ ಪ್ರೀತಿಸಿದ ಗೂಡೆ ಹೆಂಗಿದ್ದರೂ ಮೊದುವೆ ಆದರ್‍ಲಿ ತಪ್ಪೇನ್? ನೀವೆ ಹೇಳಿ ಬುಡಿ. ನಂಗೆ ತಾನೇ ಆ ಗೂಡೆನ ತಂದ್‌ಕಂಡದ್ ಬೇರೆವ್ಕೆ ಚಿಂತೆ ಬೇಡ. ನಮ್ಮ ಮೊದುವೆ ದಿನಕ್ಕೆ ಒಂದು ದಿನ ಮುಂದೆ ಓಪನ್ ಆದ ಬ್ಯೂಟಿ ಪಾರ್ಲರ್ ಅಲ್ಲಿಗೆ ಬಂದಿತ್ತ್. ಅದ್ಕೆ ನನ್ನ ಗೂಡೆ ಬಾರೀ . . ಪೊರ್‍ಲು.

ಅಬ್ಬಾ! ಏನ್ ಪೊರ್‍ಲು ಕಾಂಬೋದು ಅಂದ್ ಹಿಂಬೊತ್ ಸೂರ್ಯ ಮುಳ್ಗುವ

## ಹೊಸ ಬೊದ್ಕು

ಹೊತ್ತಲಿ ಸೂರ್ಯ ಕೆಂಪು ಕೆಂಪು ಆದಾಂಗೆ, ನನ್ನ ಗೂಡೆ ಕಪ್ಪ್ ಕಪ್ಪ್ ಆಕಂಡ್ ಬಾತ್. ನನ್ನ ಗೂಡೆ ಕಪ್ಪ್ ಕಪ್ಪ್ ಆದರೂ ನಂಗೆ ಅವಳೇ ಪೊರ್ಲು ತಾನೇ? ನೀವೇನ್ ತಲೆ ಕೆಡ್ಸಿಕಂಬದು ಬೇಡ. ಮಾರನೆ ದಿನ ನಾವು ಇಬ್ಬೊರು ದೇವಸ್ಥಾನಕ್ಕೆ ಹೋಗಿದ್ದ. ನಾವು ಅಲ್ಲಿ ಕಾರ್ ಇಳ್ದದ್ದ್ ಒಂದು ಗೊತ್ತುಟು. ನನ್ನ ಫ್ರೆಂಡ್–ಂತ ಹೇಳುವಂವ ಅವನ ಹೆಣ್ಣ್‌ನ ಒಟ್ಟಿಗೆ ದೇವಸ್ಥಾನಕ್ಕೆ ಬಂದಿತ್. ಅವನ ಹೆಣ್ಣ್‌ನ ಪೊರ್ಲು ಅಂದರೆ ಹೇಳಿ ಸುಖ ಇತ್ಲೆ. ಸುರ ಲೋಕದ ಸುರ ಸುಂದರಿನ ಹಂಗೆ ಇತ್ತ್. ಅದ್ಕೆ ಏನೋ? ಅವಂಗೆ ಭಾರಿ ಜಂಭ ಕಂಡದೆ "ಇವು ಯಾರ್ ನಿನ್ನ ಗೂಡೆನ–ಂತ ಕೇಳ್ತ್.

"ಅಲ್ಲ ಬೇರೆವರ ಹೆಣ್ಮ್‌ಕ್ಕಳ ಒಟ್ಟಿಗೆ ನಾ ಬಂದದಾ?"ಂತ ಹೇಳ್ದೆ. ಪಾಪ. ನನ್ನ ಗೂಡೆಗೆ ನಾ ಅಷ್ಟ್ ಕಪ್ಪಾ!ಂತ ಬೇಜಾರೇ ಬೇಜಾರ್. ಅಲ್ಲಿಂದ ದೇವ್ರುಗೆ ನಾವು ಇಬ್ಬೊರ್ ಒಟ್ಟಿಗೆ ಅಡ್ಡ ಬಿದ್ದ್ ಎದ್ರ್‌ಕನ ಜನಗೆಲ್ಲಾ ನನ್ನ ಮೋರೆನ ಒಮ್ಮೆ ಅವಳ ಮೋರೆನ ಒಮ್ಮೆ ಹುಟ್ಟಿದ ಮೇಲೆ ಮೊನ್ಸ್‌ರ ನೋಡದವರ ಹಂಗೆ ಹಠ ಹಿಡ್ದ್ ನೋಡಿಕೆ ಸುರು ಮಾಡ್ದ. ಅಲ್ಲ,ಇವ್ಕೆ ಯಾಕೆ ನಮ್ಮ ಪೊರ್ಲುಗ?

ನಾ ಅವಳ್‌ಂದ ಹಂಞ ಬಿಳಿ ಆಗಿ ಪೊರ್ಲು ಇದ್ದೆ. ಅದ್ ಹೋಗಲಿ ಬುಡಿ, ನಾ ಎಷ್ಟಾದರೂ ಹೈದ ತಾನೆ. ಮನೆಗೆ ಬಂದ್ ನನ್ನ ಗೂಡೆ "ಒಯ್ ನಾ ಅಷ್ಟ್ ಕಪ್ಪಾಗಿ ಕಾಣ್ತ್‌ತ ಒಳೆನಾ! ಹೆಂಗಾರ್ ಮಾಡಿ ನಾಳೆಂದ ಬಿಳಿ ಆಗಿ ನೊಡವರ ಕಣ್ಣ್‌ಗೆ ನಾ ಪೊರ್ಲು ಕಾಣಕೊ ಎಂತ ಮಾಡ್ದು ಯಾ" ಂತ ಕೇಳ್ತ್. ನೀ  ಸುಮ್ಮನಿರ್ ನಿನ್ನ ಮೊದುಮೆ ಆದ್ ನಾತಾನೇ. ಕಂಡೊವು ಮೊದುವೆ ಆತ್ಲೆ ಅಲ್ಲಾ. ನೀ ಕಪ್ಪಾದರೂ ನೋಡಿಕೆ ಲಕ್ಷಣ ಒಳ, ಗೂಡೆಗೆ ಸಮಾದಾನ ಹೇಳ್ದೆ. ಒಂದ್ ದಿನ ನಾವು ನನ್ನ ಜೋಸ್ತಿನ ಮೊದುವೆಗೆ ರೆಡಿ ಅದ. ನನ್ನ ಗೂಡೆ ಒಳ್ಳ ಝುರಿ ಸೀರೆ ಉಟ್ಟ್ ಲಾಯ್ಕ ಮೇಕಪ್ ಮಾಡಿಕಂಡ್ ಹೊರ್ಡಿಕೆ ಬರೇ ಎರಡ್ ಮೂರು ಗಂಟೆ ಮಾತ್ರ ತಕಂಡಿತ್ತ್. ನಾ ಅವಳಿಗೆ ಬೇಕಾಗಿ ಲಾಯ್ಕಲಿ ಸ್ಟೈಲ್ ಮಾಡಿತ್ಲೆ. ನಾವಿಬ್ಬರು ಮೊದುವೆ ಹಾಲ್ ಒಳೆಗೆ ಕಾಲ್ ಇಸುದೇ ತಡ, ನಮ್ಮ ಸುತ್ತ ಮುತ್ತ ಸತ್ತ ದನಕ್ಕೆ ಕಕ್ಕೆಗ ಸೇರ್ದ್ ಹಂಗೆ ಸುತ್ತ ಸೇರ್ದ. ಒಂದ್ ಗೂಡೆ ನನ್ನ ಒಟ್ಟಿಗೆ ಕೇಳ್ತ್. "ಅದೇನ್ ನಿನ್ನ ಗೂಡೆ ಅಷ್ಟೊಂದ್ ಕಪ್ಪು"ಂತ. ನಂಗೆ ಸಿಟ್ಟ್ ಬಾತ್. "ನನ್ನ ಗೂಡೆನ ಕಪ್ಪುಂತ ಹೇಳಿಕೆ ಇವಳ ಅಪ್ಪ ನಂಗೆ ಮೊದುವೆ ಮಾಡ್ಸಿದಾ? ನನ್ನ ಗೂಡೆ ಕಪ್ಪು ಆದರೆ ಅವಳ ಮಾತ್ ಇವ್ಕೆ ಕಪ್ಪಾಗಿ ಕಂಡತ?" ಂತ ಮನ್ಸ್‌ಲೇ ಬೊಯಿಕಂಡೆ. ಮೊದುವೆ ಮುಗ್ಗಿ ಮನೆಗೆ ಬಂದ ನನ್ನ ಗೂಡೆಗೆ ತಲೆ ಬಿಸಿ ಆತ್. ಮಾರನೆ ದಿನಂದ ದಿನಕ್ಕೊಂದು ಮನೆಗೆ ಹೋಗಿ ಬಿಳಿ ಆಗುವ ಉಪಾಯನ ಕೇಳಿಕೆ ಸುರು ಮಾಡ್ತ್. ಎಲ್ಲವೂ ಒಂದೊಂದು ತರದ ಉಪಾಯಗಳ ಹೇಳಿಕೆ ಸುರು ಮಾಡ್ದ. ಗೂಡೆಗೆ ಜಾಸ್ತಿ ತಲೆ ಬಿಸಿ ಆಗಿ ಹೇಳ್ದ ಮೊದ್ದಗಳ ಮಾಡದೇ ಅವಳೇ ಉಪಾಯಗಳ ಕಂಡ್ ಕಣ್ಣ್‌ತ್ತ್.

ಒಂದ್ ದಿನ ಪೇಟೆ ಕಡೆ ಹೋಗಿತ್ತ್. ಅಲ್ಲಿ ಒಂದ್ ಅಂಗಡಿಲಿ ಕ್ಲೀನ್ ಪೌಡರ್‌ಂತ

ಬರ್ದಿತ್ತ್. ಇದ್ ಮೋರೆಗೆ ಹಾಕುವ ಪೌಡರ್–ಂತ ಹೇಳಿ ಪೌಡರ್ ಪ್ಯಾಕೆಟ್ ತಕಂಡಿತ್ತ್. ಪೌಡರ್ ಹಾಕಿ ಒಂದ್ ಗಂಟೆ ಕಳ್ದ್ ತೊಳಿಯಕೆ–ಂತ ಬರ್ದಿತ್ತ್. ಕುಸಿಲಿ ಮನೆಗೆ ಬಂದ ನನ್ನ ಗೂಡೆ ಮೋರೆಗೆ ಪೌಡರ್‌ನ ಹಾಕಿದ ಅವಳಿಗೆ ಒಂದ್ ಗಂಟೆ ಬುಡಿ, ಒಂದ್ ನಿಮಿಷ ಕೂಡ ಮೋರೆಲಿ ಇಸಿಕಂಬಕೆ ಆತ್ಲೆ. ಆಗಳೇ ಅವಳ ಮೋರೆ ಚೂಲಿ ಹೋಕೆ ಸುರು ಆತ್. ಮೋರೆ ತೊಳ್ಕಂಡ್ ಬಂದ ನನ್ನ ಗೂಡೆ "ಹೆಂಗೆ ಉಟ್ಟುಯಾ ಬಿಳಿ ಆತಾ ನನ್ನ ಮೋರೆ" ಕೇಳಿಕೆ ಸುರು ಮಾಡ್ತ್. ನಂಗೆ ನಗೆ ಬಾತ್. "ಯಾಕೆ ನಗಾಡ್‌ತಾ ಒಳರಿ? ನಾ ಬಿಳಿ ಆದು ನೀವ್ಗೆ ಇಷ್ಟ ಇಲ್ಲೆನಾ?"–ಂತ ಕೇಳ್ತ್. ಹೋಗಿ ಕನ್ನಡಿ ಮುಂದೆ ನಿಲ್ಲಿಕೆ ಹೇಳ್ದೆ ಗೂಡೆ ಕನ್ನಡಿ ಮುಂದೆ ನಿಲ್ಲುವ ಹೊತ್ತಲಿ ಅವಳ ಮೋರೆ ಚೂಲಿ ಹೋಗಿ ಅಷ್ಟ್ ದಪ್ಪಲಿ ಗುಳ್ಳೆಗ ಎದ್ರಿಕೆ ಸುರು ಆತ್. ಬಾತ್‌ರೂಂ ಹಕ್ಕಲೆ ಹೋಗಿ ಹೆರ್ಕಿ ಇಟ್ಟ ಪ್ಯಾಕೇಟ್‌ನ ತೆಗ್ದ್ ನೋಡ್ದೆ ಅದ್ ಬ್ಲೀಚಿಂಗ್ ಪೌಡರ್ ಪ್ಯಾಕೆಟ್ ಆಗಿತ್ತ್. ಮತ್ತೆ ಒಂದ್ ವಾರ ನನ್ನ ಗೂಡೆ ಜಾಲ್‌ಗೆ (ಅಂಗಳಕೆ) ಕಾಲ್ ಇಸಿತ್ಲೆ

ನನ್ನ ಗೂಡೆನ ಮಾತಾಡ್ಸಿಕೆಂತ ನಮ್ಮ ಮನೆ ಹಕ್ಕಲೆನ ಅಜ್ಜಿ ಬಂದಿದ್ದ. ಇವಳ ಮೋರೆ ನೋಡ್ದ ಅಜ್ಜಿಗೆ ಬೇಜಾರಾಗಿ ಮೊದುರಂಗಿ ಕಡ್ದ್ ಮೋರೆಗೆ ಹಾಕಿಕೆ ಹೇಳ್ದ. ಅಜ್ಜಿ ಅವರ ಮನೆ ಕಡೆ ಹೊರ್ಟ್‌ದೇ ತಡ ಮೊದುರಂಗಿ ಕಡ್ದ್ ಮಿಕ್ಸಿಗೆ ಹಾಕಿ, ಮೋರೆಗೆ ಲಾಯ್ಕಲಿ ಪೂಜಿತ್. ಅರ್ಧ ಗಂಟೆ ಕಳ್ದ್ ನೋಡಕನ, ಹುಲಿನ ಮೈಮೇಲೆ ಇದ್ದ ಪಟ್ಟೆಗ ಅವಳ ಮೋರೆಲಿ ಬರೆ ಎಳ್ದಿತ್ತ್. ಅಂದರೂ ಅವಳ ಹಠ ಬುಡದೆ, ಒಂದ್ ದಿನ ನನ್ನ ಪೇಟೆ ಕಡೆಗೆ ಕರ್ಕಂಡ್ ಹೋತ್. ಅಲ್ಲೊಂದು ಅಂಗಡಿಲಿ ಮುಖದ ಸೌಂದರ್ಯಕೆಂತ ಬೋರ್ಡ್ ನೇತಾಲಾಡಿತ್ತ್. ಅದನ್ನೇ ಅರ್ಧ ಗಂಟೆ ನಿತ್ತ್ ನೋಡಿಕೆ ಸುರು ಮಾಡ್ತ್ ಲಿಂಬೆ ರಸದೊಂದಿಗೆ ಅರಸಿನ ಪುಡಿ ಅದ್ದಿ ಲೇಪಿಸಿಂತ ಬರ್ದಿತ್ತ್.

ಬಾರೀ ಅಚ್ಚರಿ! ಲಿ ನೋಡ್ದ ನನ್ನ ಗೂಡೆ, ನಾ ಎರಡ್ ಹೆಜ್ಜೆ ಮುಂದೆ ಇಸ್‌ಕನ ಅವಳ್ ನಾಲ್ಕ್ ಹೆಜ್ಜೆ ಮುಂದೆ ಇಸಿ ಅರ್ಸಿನ ಹುಡಿ ಮತ್ತೆ ನಿಂಬುಳಿ ತಕಂಡಿತ್ತ್. ಅಂದ್ ಕತ್ತಲೆಗೆ ಮನೆಗೆ ಬಂದ ನನ್ನ ಗೂಡೆ, ಸೌಂದರ್ಯ ಸ್ಪರ್ಧೆ ಇದ್ದವರ ಹಂಗೆ, ಅಡ್ಗೆ ಮನೆಲಿ ಇಸಿದ ಪ್ಯಾಕೇಟ್‌ಗೆ ಕೈ ಹಾಕಿತ್. ಅಂದ್ ಕರೆಂಟ್‌ಗೆ ಏನೋ ಸಂಕಟ. ಇವಳ ಸೋಲ್ಸುವ ಆಲೋಚನೆಲಿ ಕೈ ಕೊಟ್ಟಿತ್ತ್. ನಿಂಬುಳಿ ಕೊಯ್ದ್ ರಸದ ಒಟ್ಟಿಗೆ ಈ ಹೊಡಿನ ಸೇರ್ಸಿ ಮೋರೆಗೆ ಹಾಕಿತ್. ರೂಂಗೆ ಹೋಗಿ ಕುದ್ದ ನನ್ನ ಗೂಡೆ ಅಲ್ಲೇ ಡ್ಯಾನ್ಸ್ ಮಾಡಿಕೆ ಸುರು ಮಾಡ್ತ್.

ಒಂದ್ ಕಡೆಲಿ ಇವಳ ಬೊಬ್ಬೆ, ಇನ್ನೊಂದ್ ಕಡೆಲಿ ರೂಂ ಲಿ ಇದ್ದ ಸಾಮಾನ್‌ಗ ಆಚೆ, ಈಚೆ ಹೊಣ್‌ಕ್ತಿದ್ದ. ನನ್ನ ಅರ್ಜೆಂಟ್‌ಲಿ ಬಕೇಟ್‌ಲಿ ಇದ್ದ ನೀರ್ ತಂದ್ ಅವಳ ತೊಳ್ಸಿದೆ. ನೋಡಿರೆ ಅದ್ ದನಕ್ಕೆ ಕುಡಿಯಕೆ ಇಸಿದ ತೆಳಿ ಆಗಿತ್ತ್. ಹೆಂಗೋ ಒಂದ್ ಗಂಟೆ ಕಳ್ದ ಮೇಲೆ ಸರಿ ಆದರು ಮೋರೆ ಇಡೀ ಬಾಪಿ ಹೋಗಿತ್ತ್. ಮತ್ತೆ ಒಂದು ವಾರ

## ಹೊಸ ಬೊದ್ಕು

ಬಿಳಿ ಆಗುವ ಸಾಹಸಕ್ಕೆ ಹೋತ್ಲೆ. ಟಿ.ವಿ ನೋಡಿಕಂಡ್ ದಿನ ಕಳ್ದ ಇವಳ ಹುಚ್ಚಿ ಮತ್ತೆ ಸುರು ಆತ್ ಮೋರೆ ಬಿಳಿ ಆಕೆ ಸರ್ಜರಿ ಮಾಡುವ ಉಪಾಯ ನಂಗೆ ಹೇಳ್ತ್. ಅಲ್ಲ ಇವಳ ಪೊರ್ಲುಗೆ ಬೇಕಾಗಿ ನಾ ಅಷ್ಟೊಂದು ದುಡ್ಡು ಎಲ್ಲಿಂದ ಮಾಡ್ದು? ಏನೋ ಪುಣ್ಯಕೆ ಒಂದು ದಿನ ಅವಳ ಜೋಸ್ತಿ ನಮ್ಮ ಮನೆಗೆ ಬಂದಿತ್. ಇವಳ ಆಸೆನ ಜೋಸ್ತಿ ಒಟ್ಟಿಗೆ ಹೇಳ್ಕನ, ಪಾಪ ಆ ಗೂಡೆಗೆ ದೇವ್ರೇ ಬುದ್ದಿನ ಹಂಞ ಜಾಸ್ತಿ ಕೊಟ್ಟಿರೊಕು. “ನಿಂಗೆ ಬಿಳಿ ಆಗುವ ಆಸೆ ಬೇಡ. ಬಿಳಿ ಆದರು ನೀನೇ, ಕಪ್ಪಾದರೂ ನೀನೆ, ನೀ ಎಲ್ಲವರ ತಲೆ ಕೂದೊಲು ನೋಡ್, ಬಿಳಿ ಆದರೆ ತಲೆಗೆ ಕಪ್ಪು ಕಲರ್ ಹಾಕಿ ಕಪ್ಪು ಮಾಡಿಕಂಡವೆ. ಯಾಕೆ ಹೇಳ್, ಬಿಳಿ ಕಾಂಬಕೆ ಆಗದ್”–ಂತ. ನನ್ನ ಮಾರಾಯ್ತಿಗೆ ಇದ್ ನಿಜ–ಂತ ಗೊತ್ತಾತ್. ಇನ್ನ್ ಮುಂದೆಗೆ ನಂಗೆ ಬಿಳಿ ಆಗುವ ಆಸೆ ಬೇಡಾ–ಂತ ಬಿಳಿ ಆಗುವ ಉಪಾಯಕ್ಕೆ ಗುಡ್ ಬೈ ಹೇಳ್ತ್. ಇವಳ ಪಿ.ಹೆಚ್.ಡಿ ಇಲ್ಲಿಗೆ ಮುಗ್ಸಿತ್. “ಅಬ್ಬಾ! ನನ್ನ ಮಾತಿಗೆ ನನ್ನ ಗೂಡೆ ಬೆಲೆ ಕೊಡದಿದ್ದರೂ ಜೋಸ್ತಿನ ಮಾತ್‌ಗೆ ಬೆಲೆ ಕೊಟ್ಟತ್ತ್‌ಂತ ಕುಸಿ ಆತ್. ಈಗ ನಂಗೆ ಹಂಞ ತಲೆಬಿಸಿ ಕಡ್ಮೆ ಆತ್.

* * * * * *

# ಕಣ್ಣ್ ನೀರ್ ಬಿದ್ದ ಆ ಹೊತ್ತ್

ಅಲ್ಲೆಲ್ಲಿ ಹರ್ದ್ ಹೋಗುವ ನೀರ್ ಕಣಿ, ಭೂಮಿ ತಾಯಿನ ನೀಲಿ ಸೀರೆಗೆ ಬೆಳ್ಳಿ ಪಟ್ಟಿ ಕಟ್ಟಿದಾಂಗೆ ಕಾಣುವ ಊರೇ ಸಾರಂಗಿ. ಅಲ್ಲಿ ಹದಿನೆಂಟ್ ವರ್ಷ ತುಂಬಿದ ಗೂಡೆ ಸೀಮ, ಅಗಲ ಆದ ನೀಲಿ ಕಣ್ಣ್, ಬಿಲ್ಲ್‌ನ ಹಂಗೆ ಬೊಗ್ಗಿದ ಉಬ್ಬು, ಜೂಂಚಿ ಮೂಕು, ನೆಗಾಡ್‌ಕನ ಗುಂಡಿ ಬೀಳುವ ಕೆನ್ನೆ. ಇದರೆಲ್ಲ ಹೊಂದಿಕೊಂಡ್ ಇದ್ದ ಶರೀರ ಸೀಮಂದ್. ಪಿ.ಯು.ಸಿ ಮುಗ್ಸಿತ್ತ್. ಮನೆ ಯಜಮಾನ್ತಿ ಗೌರಿ. ಗೌರಿಗೆ ಮೂರು ಮಕ್ಕ. ಸಿಂಚನ, ಶ್ರೀನಾಥ್, ಕಡೆನ ಗೂಡೆ ಸೀಮ. ಮಕ್ಕ ಸಣ್ಣದಿರ್‌ಕನ ಅಪ್ಪ ತೀರಿ ಹೋಗಿದ್ದ. ವರ್ಷ ಕಳ್ದಾಂಗೆ ಸಿಂಚನಾ, ಶ್ರೀನಾಥ್ ಇಬ್ಬರ ಮೊದುವೆ ಮುಗ್ದ್ ಹೋಗಿತ್ತ್. ಈಗ ಸೀಮಂಗೆ ಹಯ್ದ ಹುಡ್ಕುವ ಹಠ. ನೆಂಟಸ್ತಿಕೆ ಬಂದವರ ಒಪ್ಪದ ಸೀಮ–ಂಗೆ ಇನ್ನೂ ಓದುವ ಆಸೆ. ವಿದ್ಯೆಗೇನ್ ವರ್ಷ ಬೇಕಾಗಿಲ್ಲೆ–ಂತ ಶಾಲೆಗೆ ಹೋಕೆ ಅಮ್ಮನ ಒಟ್ಟಿಗೆ ಕೇಳಿಕಂಡಿತ್ತ್. ಮಗಳ ಆಸೆನ ಪೂರೈಸಿಕೆ ಅಮ್ಮಂಗೆ ಆತ್ಲೆ. ಅಮ್ಮನ ಹಣೆಲಿ ದೇವ್ರು ಬರ್ದ ಆಯ್ಸ ಮುಗ್ದಿತ್ತ್.

ಸೀಮಂಗೆ ಈಗ ಅಣ್ಣ, ಅತ್ತಿಗೆ ಇದ್ದ್ ಅವೇ ಅವಳ ನೋಡಿಕಂಬ ಹಂಗೆ ಆತ್. ಸೀಮ ಶಾಲೆಗೆ ಹೋಕೆ ಅಣ್ಣನ ಒಟ್ಟಿಗೆ ಹಠ ಮಾಡ್ತ್. ಪ್ರತಿ ಸರ್ತಿನೂ ಒಳ್ಳೆ ಮಾರ್ಕ್ ತೆಗ್ದ್ ಪಾಸಾದ ವಿಷಯ ಅತ್ತಿಗೆಗೆ ಗೊತ್ತಾದರು ಅವಳ ಶಾಲೆಗೆ ಕಳ್ಸಿ ಒಪ್ಪಿತ್ಲೆ. ಅತ್ತಿಗೆ ಸುಲೋಚನ–ಂಗೆ ಸೀಮನ ಒಟ್ಟಿಗೆ ತುಂಬಾ ವಿರೋದ. ಅವಳ ಸ್ವರ ಕೇಳಿರೆ, ಕುದ್ದರು, ನಿತ್ತರು, ಓದಿರು ವಿರೋಧದವರ ಹಂಗೆ ಸುಮ್ಮ ಸುಮ್ಮನೆ ಆರೋಪಗಳ ಹೊರ್ಸಿ ಅವಳ ಮನ್ಸ್‌ಗೆ ಬೇನೆ ಮಾಡ್ತಿತ್ತ್. ಯಾಗೋಳ್ ನನ್ನ ನಿಂದನೆ ಮಾಡುವ ಅತ್ತಿಗೆಗೆ ನನ್ನ ಪ್ರತಿಭೆನ ತೋರ್ಸಿ,

ಅವರ್‌ಂದಲೇ ಹೊಗುಳ್ಳಿಕಣಕುತ ಮನ್ಸ್‌ಲಿ ನೆನ್ಸಿ. ಎಲ್ಲಾ ಕಷ್ಟಗಳ ಮರ್ತ್ ಓದುವ ಆಸೆಲಿ ಅವಳ ಅಕ್ಕನ ಮನೆ ಬೆಂಗಳೂರಿಗೆ ಹೋಕೆ ಬಸ್ಸ್ ಕಾದ್ ಕಂಡ್ ನಿತ್ತಿತ್ತ್. ಸೀಮನ ಕಳ್ಸಿ ಕೊಡಿಕೆ ಅಣ್ಣ ಆಗಲಿ, ಅತ್ತಿಗೆ ಆಗಲಿ ಬಾರದೆ ಒಂಟಿ ಆಗಿ ನಿತ್ತಿತ್ತ್.

ನಾ ಯಾಕೆ ಬೇಕಾಗಿ ಬೆಂಗಳೂರಿಗೆ ಹೋಗ್ತ್ ಒಳೆ?" ಗೊತ್ತಿಲ್ಲದವರ ಹಂಗೆ ನಿತ್ತ ಅವಳ ಎಚ್ಚರ ಮಾಡುವ ಹಂಗೆ ಬಸ್ಸ್ ಬಂದ್ ನಿತ್ತತ್ತ್. ಎಚ್ಚರ ಆದವಳ ಹಂಗೆ ಸೀಮ ಬಸ್ಸ್ ಹತ್ತಿತ್ತ್.

"ನನ್ನ ಜೀವನ ಹೆಂಗೆ ನಡ್ದದೆ? ನನ್ನ ಮುಂದಿನ ಜನ್ಮ ಹೆಂಗೆ ಇರ್ದು ಅಂತ ಯೋಚನೆ ಮಾಡ್ತಿದ್ದ ಸೀಮ-ಂಗೆ ಬೆಂಗಳೂರಿಗೆ ಎತ್ತಿಕೆ ಅಷ್ಟ್ ತುಂಬ ಹೊತ್ತ್ ಬೇಕಾಗಿತ್ಲೆ. ಬೆಂಗಳೂರ್ ಬಸ್ ಸ್ಟಾಪ್‌ಲಿ ಇಳ್ದರೆ ಅಲ್ಲಿ ಕೂಡ ಅವಳ ಮಾತಾಡ್ಸಿಕೆ ಯಾರೂ ಇತ್ಲೆ.

ರಿಕ್ಷಾದವನ ಕರ್ದ್ ಸೀಮ ಅಕ್ಕನ ಮನೆ ಕಡೆ ಕೊರ್ಟ್ತ್ತ್. ತಂಗೆಗೆ ಅಕ್ಕನ ಮನೆಲಿ ಕುಸಿನ ಮಾತ್ ಇಲ್ಲದೆ ಮನೆ ಒಳಗೆ ಒಂದ್ ತರಾ ಸಂಶಯದ ಗಾಳಿ ಬೀಸಿತ್. ಅಕ್ಕನ ಮೋರೆಲಿ ತಂಗೆನ ನೋಡಿ ಕುಸಿ ಇತ್ಲೆ. ಅವಳ ಬಟ್ಟೆ ಬೊರಿಗಳ ಒಂದ್ ಕರೆಲಿ ಇಸಿ ಬಚ್ಚಲ್ ಮನೆಗೆ ಹೋಗಿ ಕೈಕಾಲ್, ಮೋರೆ ತೊಳ್ಕ್‌ಂಡ್ ಬಂದ ಸೀಮ-ಂಗೆ ಊಟದ ಮೇಜಲಿ ಚಾಯ, ತಿಂಡಿ ತಂದ್ ಇಸಿತ್ ಅಕ್ಕ. ಚಾಯ ಕುಡಿಯಕೆ ಕುದ್ದಿತ್ ಸೀಮ. "ನೀ ಇಂದ್ ಇಲ್ಲಿಗೆ ಬಂದಿಯ-ಂತ ನಾವ್ಗೆ ಗೊತ್ತಿತ್ಲೆ. ಏನ್, ಮನೆಲಿ ಅಣ್ಣ, ಅತ್ತಿಗೆ ಹೆಂಗೆ ಒಳ? ಅಣ್ಣ, ಅತ್ತಿಗೆ ಯಾರೂ ನಂಗೆ ಹೇಳ್‌ತ್ಲೆ ನೀ ಬರುವ ವಿಷಯ" "ಏನೋ ಬೇಜಾರ್ ಆತ್ ಅಕ್ಕ. ನಂಗೆ ಕಾಲೇಜ್‌ಗೆ ಹೋಕು-ಂತ ಆಸೆ. ಊರುಲಿ ಓದೊಕು-ಂತಾದರೆ ತುಂಬಾ ನಡಿಯೊಕು, ಓದಿಕೆ ಹೊತ್ತು ಸಿಕ್ಕುದ್ಲೆ. ಅದ್ಕೆ ನಿನ್ನ ಮನೆಂದ ಕಾಲೇಜ್‌ಗೆ ಹೋಕ್-ಂತ ಬಂದೆ" ಕಷ್ಟ ಬಂದ್ ಉತ್ತರ ಹೇಳ್ತ್. ಉತ್ತರ ಕೇಳಿಕಂಡ್ ಇದ್ದಾಂಗೆ ತಿಂಡಿ ಅವಳ ಗಂಟ್ಲಲ್ಲಿ ಸೆಕ್ಕಿ ಕಂಡ ಹಂಗೆ ಆಗಿ ನೀರ್ ಕುಡ್ದ್ ಸರಿ ಮಾಡಿಕಣ್ಣ್‌ತ್ತ್. ಭಾವ ಶ್ಯಾಮನ ಮೋರೆ ಕೂಡ ಅದುವೇ ಪ್ರಶ್ನೆನ ಕೇಳುವ ಹಂಗೆ ಹುಬ್ಬುಗ ಗಂಟ್ ಹಾಕಿತ್ತ್.

"ಬಾಕೆ ಆಗದ ಅನಿಷ್ಟ ಮತ್ತೆ ಇಲ್ಲಿಗೆ ಬಾತ್. ಅವನ ಮೋರೆ ಕಾದ್ ಕೆಂಡದ ಹಂಗೆ ಆಗಿತ್ತ್. ಸೀಮಂಗೆ ಅತ್ತಿಗೆನ ಮೋರೆ ನೋಡಿ ಅಭ್ಯಾಸ ಆಗಿ ಇವನ ಸಿಟ್ಟ್‌ನ ಅಷ್ಟ್ ಲೆಕ್ಕಕೆ ತಕಣ್‌ತ್ಲೆ.

"ಛೇ ಅಣ್ಣ ಅತ್ತಿಗೆಗೆ ನಾ ಬೇಡದವಳಾದರೂ ನಂಗಾಗಿ ಚಿಂತೆ ಮಾಡುವ ಅಕ್ಕ ಆದ್ರ್ ಇರ್ದು-ಂತ ನಾ ನಂಬಿ ಕಂಡಿದ್ದೆ. ಅದ್ ಸುಳ್ಳು ಆಗಿ ಬುಟ್ಟದೆ-ಂತ ಸೀಮ ಬೇಜಾರ್ ಮಾಡ್ತ್. ಕತ್ತಲೆಂದ ಬೊಳ್ಪುನವರೆಗೆ ಬಸ್ಸ್‌ಲಿ ಕುದ್ದ್ ಬೊಚ್ಚಿ ಹೋತ್. ಹಂಞ ಸರಿ ಆದ ಮೇಲೆ ಮಾತಾಡಕ್-ಂತ ನೆನ್ಸಿತ್. ಆಗ ಒಳಗೆಂದ ಶ್ಯಾಮ ಹೇಳ್ದು ಕೇಳ್ತ್. "ಸೀಮ ನಾವು ಇಂದ್ ಒಂದ್ ದಿನದ ಟೂರ್ ನಿಗಂಟ್ ಮಾಡಿದ್ದ. ಹೆಂಗು ನೀ ಬಂದಳ ತಾನೇ, ನಮ್ಮ ಬಟ್ಟೆಗ ಎಲ್ಲಾ ರಾಸಿ ಬಿದ್ದುಟು ಒಗ್ದ್ ಹಾಕ್" ಉತ್ತರಕ್ಕೆ ಕಾಯದೆ ಅಕ್ಕ ಭಾವ ಹೊರ್ಟ್

ಹೋದ. ಮಾತ್‌ನ ಕೇಳ್ಸಿಕಂಡ ಸೀಮಗೆ ಕೆಬಿಗೆ ಕಾದ ಸೀಸೆನ ಹೊಯ್ದಂಗೆ ಆತ್. "ಅಕ್ಕನ ಮನೆಲಿ ಆದ್ರ್ ಹಂಞ ಕುಸಿಲಿ ಇರಕ್-ಂತ ನಂಬಿದೆಂತ" ಸೀಮನ ಮನ್ಸ್ ಆಗಿತ್ತ್. ಮನೆಲಿ ಅತ್ತಿಗೆ ಹೊರ್ಸುವ ಅಪವಾದಗಳ ನೆನ್ಸಿಕಂಡ್ ಅಕ್ಕ , ಬಾವನ ಮಾತ್ ಕೆಬಿಗೆ ಕೇಳ್ದಂಗೆ ಆತ್. "ಯಾಕೆ ನಾ ಯಾರಿಗೂ ಬೇಡದಾಂಗೆ ಆದೆ? ಯಾರಿಗೆ ವಂಚನೆ ಮಾಡ್ದೆ? ರಕ್ತ ಸಂಬಂಧದ ಅಣ್ಣ, ಅಕ್ಕಂಗೆ ನಾ ಬೇಡದವಳಾಂಗೆ ಆದರೆ ಅತ್ತಿಗೆ , ಬಾವಂಗೆ ಇನ್ನೆಲ್ಲಿಂದ ಕರುಣೆ ಬಂದದೆ? ಬಾವನ ಶ್ರೀಮಂತಿಕೆ ಅಕ್ಕನ ತಲೆ ತಿರ್ಗುವ ಹಂಗೆ ಆವುಟು. ಮನೆಲಿ ಅತ್ತಿಗೆನ ಎಲ್ಲ ಚಾಕರಿ ಮಾಡಿ ಕೊಟ್ಟಿದರೆ ನನ್ನ ಮೇಲೆ ಪ್ರೀತಿ ಇತ್ತೋ ಏನೊ? ಇವರ ಶ್ರೀಮಂತಿಕೆ ಮುಂದೆ ಅವರ ಕಾಲ್ ಒರ್ಸುವ ಬಟ್ಟೆ. ಇವ್ಕೆ ಪ್ರೀತಿ, ವಿಶ್ವಾಸ, ಗೌರವ, ವಿದ್ಯೆಗಳ್‌ಂದ ದುಡ್ಡು, ಆಸ್ತಿ ಅಂತಸ್ತು, ಕಾರ್, ಬಂಗಲೆ, ಚಿನ್ನ ಇಂತದೆ ಬೇಕಾದ್." ಅಕ್ಕನ ಮನೆಲಿ ಇದ್ದ್ ಕಾಲೇಜ್‌ಗೆ ಹೋಗುವ ಆಸೆನ ಹೊತ್ತ್ ಬಂದ ಸೀಮಂಗೆ ಅಕ್ಕ, ಬಾವ ಯಾವ ಮುಲಾಜಿ ಇಲ್ಲದೆ ಅವರ ಚಾಕರಿಗೆ ಒಳ್ಸಿಕಂಡ್ ಹೂಡುವ ಎತ್ತ್‌ನ ಹಂಗೆ ಆತ್.

ತಿರ್ಗಿಕೆ ಹೋದ ಅಕ್ಕ ಬಾವ ಮನೆಗೆ ಬಾಕನ ಗಂಟೆ ಹನ್ನೊಂದ್ ಆಗಿತ್ತ್. ಮನೆಲಿ ಸೀಮ ಒಂದೇ ಇದ್ದ್ ಎಲ್ಲಾ ಕೆಲ್ಸಗಳನ್ನ ಮಾಡಿ ಮುಗ್ಸಿತ್. ಮನೆಲಿ ಎಲ್ಲಾ ಸೌಕರ್ಯ ಇದ್ದರೂ ಏನೋ ಕಳ್ಕಂಡವಳ ಹಂಗೆ ಅವಳ ಮನ್ಸಿಗಾಗಿತ್ತ್.

ಟಿ.ವಿ ನೋಡಿಕಂಡ್ ಕುದ್ದ ಗೂಡೆಗೆ ಹೊತ್ತ್ ಬೇಗ ಹೊತಿತ್ಲೆ. ಕಡೆಗೆ ಕುದ್ದಲ್ಲಿ ತೂಕಡಿಕೆ ಬಂದ್ ಸೋಪಕೆ ಒರ್ಗಿತ್ ಸಿಂಚನ ಕರೆಕನೇ ಎಚ್ಚರ ಆಗಿತಷ್ಟೆ. "ಏನ್ ಎಷ್ಟ್ ಹೊತ್ತುಂದ ನಿನ್ನ ಕರಿತಾ ಒಳೆ. ಏನ್ ಮಾಡಿಕಂಡ್ ಇದ್ದೆ ಇಷ್ಟ್ ಹೊತ್ತ್? ಟಿವಿ ನಿಲ್ಸಿತ್ಲೆ ಅದರ ಎದ್ರ್ ಸುಮ್ಮನೆ ಕುದ್ದ್ ನಿದ್ದೆ ಮಾಡಿಯ ಅಲಾ. ನಿನ್ನ ವಿಶ್ವಾಸಲಿ ಮನೆನ ಬುಟ್ಟು ಹೋದರೆ ಮನೆ ಹೊತ್ತಿ ಹೋದರೂ ನಿಂಗೆ ಗೊತ್ತಾಕಿಲೆ." ಬೊಯ್ಯೊಕೆ ಸುರು ಮಾಡ್ತ್.

"ಇಲ್ಲೆ ಅಕ್ಕ ಅಣ್ಣ ಅತ್ತಿಗೆನ ಬುಟ್ಟ್ ಬಂದೆ ಅಲ್ಲ, ಅದ್ಕೆ ಹಂಞ ಬೇಜಾರ್ ಆತ್."

"ಸಾಕ್ ಮಾಡ್ ಮನೆಲಿ ಇರ್‌ಕನ ಅಣ್ಣ ಅತ್ತಿಗೆನ ಒಟ್ಟಿಗೆ ಜಗಳ ಮಾಡಿಕೆ ಆತ್. ಮತ್ತೆ ನಿಂಗೆ ಎಲ್ಲಿಂದ ಬೇಜಾರು ಆದು?" ಅಕ್ಕನ ಮಾತ್ ಕೇಳಿ ಸೀಮ-ಂಗೆ ಶಾಕ್ ಆತ್. "ಯಾಕೆ ಅಣ್ಣ, ಅತ್ತಿಗೆನ ಸುದ್ದಿ ತೆಗೆಕನ ನಿನ್ನ ಉಸುರು ನಿತ್ತ್ ಹೋತ್?" ಕಾಲೇಜ್ ಸೇರಿಕೆ ನೀ ಬಂದಳ, ನಿನ್ನ ಬಾವ ಏನೂ ಹೇಳುದ್ಲೆ, ಕಾಲೇಜ್‌ಗೆ ಹೋಕೆ ನಿಂಗಾಗಿ ಅಷ್ಟ್ ದುಡ್ಡ್ ಯಾರ್ ಕಟ್ಟಿ ಇಸೆಳೊ?"

"ಸರಿ ಅಕ್ಕ ಬಾವನ ಒಟ್ಟಿಗೆ ಹೇಳಿ ನನ್ನ ಕಂಪನಿಲಿ ಕೆಲ್ಸ ಮಾಡುವ ಹಂಗೆ ಮಾಡಿಕೆ ಹೇಳ್, ನಾ ಅಲ್ಲೆ ರೂಂ ಮಾಡಿಕಂಡ್ ಜೀವನ ಮಾಡ್ನೆ."

"ಹೂಂ ಹೌದ್, ಹೌದ್ ಈಗ ಬಾವ ತಂದದರ ತಿಂದ್ ಹೆಬ್ಬಾವು ಬಿದ್ದಾಂಗೆ ಬಿದ್ದ್‌ಕಂಡಳ. ನೀ ರೂಂ ಮಾಡಿ ನಿಲ್ಲ್ ಆಗ ನಿಂಗೆ ಗೊತ್ತಾದೆ". "ನಾ ಹಗ್ಲ್, ರಾತ್ರೆ-

ಂತ ಕೆಲ್ಸ ಮಾಡಿ ನನ್ನ ಇಷ್ಟಕೆ ಇದ್ದ್ ಕಣೆ."

"ಹಾಕಂಬಕೆ ಸರಿ ಆದ ಬಟ್ಟೆ ಇಲ್ಲೆ. ನಿಂಗೆ ಕೆಲ್ಸ ಬೇರೆ ಕೇಡ್." ಸೀಮ ಅಕ್ಕಂಗೆ ಉತ್ತರ ಕೊಡಿಕೆ ಹೋತ್ಲೆ. ಅವಳ ಮನ್ಸ್‌ಗೆ ಮಾಯ ಆದ ಗಾಯ ಆಗಿತ್ತ್. ಅಣ್ಣ–ಂಗೆ ಫೋನ್ ಮಾಡಿ ಹೇಳ್ನೆ–ಂತ ತೀರ್ಮಾನ ಮಾಡ್ತ್. ಆದರೆ ಸೀಮನ ಕೈಲಿ ಮೊಬೈಲ್ ಇಲ್ಲದ್ ಅವಳ ಮನ್ಸಿಗಾತ್. ಅಕ್ಕನ ಕೈಂದ ಮೊಬೈಲ್ ಕೇಳಿರೆ ನಂಗೆ ಮರ್ಯಾದೆ ಇಲ್ಲೆ. ಅಥವಾ ಕೇಳಿ ಫೋನ್ ಮಾಡಿರೆ ನಿನ್ನ ಕಾಲೇಜ್ ಮುಗ್ಸಿ ಬಾ–ಂತ ಅತ್ತಿಗೆ ಹೇಳದೇ ಬುಡಕಿಲೆ. "ಏನ್ ಮಾಡ್ದು?" ಸೀಮನ ಮನ್ಸ್ ಯೋಚನೆನ ಮನೆ ಮಾಡಿತ್ತ್. ಯಾವ ನಿರ್ಧಾರಕೆ ಬಾಕೆ ಅವಳ ಮನ್ಸ್‌ಲಿ ಆತ್ಲೆ. ದಿನಂದ ದಿನಕೆ ನನ್ನ ಹಂಗಿಸಿ ದೂರ ಮಾಡ್ತ್ ಅಕ್ಕ. ಇನ್ನ್ ಓದಿ ಕೆಲ್ಸ ಸಿಕ್ಕಿರೆ ನಮ್ಮ ಶ್ರೀಮಂತಿಕೆ ಇವಳ ಕಣ್ಣಿಗೆ ಕಾಂಬಕಿಲೆಂತ ಸಂಶಯಂದ. "ಅಂದ್ ನೀ ಹುಟ್ಟಿದಾಂಗೆ ಅಪ್ಪನ ತಿಂದ್ ಹಾಕಿದ, ನಮ್ಮ ಮೊದುವೆ ಆಗುವವರೆಗೆ ಅಮ್ಮ ಉಷಾರ್ ಇದ್ದ ನಿನ್ನ ನಡ್ತೆನ ನೋಡಿ ಅಮ್ಮಂಗೆ ಬೇಜಾರ್ ಆಗಿ ಅವರ ತಿಂದ್ ಮುಗ್ಸಿದ, ಇನ್ನ್ ಇಲ್ಲಿಗೆ ನೀ ಬಂದ್ ನಮ್ಮ ಇಬ್ಬರ ಜಗಳ ಆಡ್ಸಿ, ನಮ್ಮ ತಲೆ ತಿಂಬಕೆ ನೋಡ್ದು ಬೇಡ. ಬೇರೆ ಹೋಗಿ ಒಬ್ಬನೇ ಇದ್ದ್ ಏನಾರ್ ಆದರೆ ನಿನ್ನ ನೋಡಿಕೆ ಅಲ್ಲಿಗೆ ಯಾರ್ ಬಂದವೆ?" ಅಕ್ಕನ ಮಾತ್. "ನನ್ನ ಹೆಂಗಾರ ಮಾಡಿ ಇಲ್ಲಿಂದ ಕಳ್ಸುದು ಹೆಂಗೆಂತ ಇವಳ ಯೋಚನೆಂತ ಸೀಮಂಗೆ ಅರ್ಥ ಆತ್. ಅಕ್ಕನ ಎದ್ರ್ ಹೂಂತ ಹೇಳಿ "ಇನ್ನ್ ನಂಗೆ ಇಷ್ಟೆಲ್ಲಾ ಹೇಳ್ದ ಮೇಲೆ ಇಲ್ಲಿ ಇರ್ದು ಸರಿ ಅಲ್ಲ. ಊರಿಗೆ ಹೋದೇ ಒಳ್ಳೆದ್"–ಂತ ತಿಳ್ದ್ ಅವಳ ಬಟ್ಟೆ ಬೊರಿಗಳ ಜೋಡ್ಸಿ ಇಸಿತ್. ಬೊಳ್ಪುಗೆ ಬೇಗ ಎದ್ದ್ ಕೈಕಾಲ್ ಮೋರೆ ತೊಳ್ದ್ ಬಂದ ಸೀಮ, ಚಾಯ, ತಿಂಡಿಗೆ ಪಾರ ಕಾಯದೆ ಬಸ್ಸ್ ಸ್ಟಾಪಿಗೆ ಹೋಗಿ ಊರಿಗೆ ಎತ್ತ ಬೇಕಾದ ಬಸ್ಸ್ ಹತ್ತಿ ಕುದ್ದತ್ತ್. ಮೈಸೂರುಗೆ ಎತ್ತುವ ಹೊತ್ತಲಿ ಸೀಮ ಕುದ್ದ ಸೀಟ್ ಖಾಲಿ ಆತ್. ಅವಳ ಮನ್ಸ್‌ಲಿ ಆದ ಬೇನೆಗಳ ಮತ್ತೆ ನೆನ್ಸಿಕಂಡ್ ಏನೇನೋ ಆಲೋಚನೆಗ ಅವಳ ತಲೆಲಿ  ಕೊಣಿಯಕೆ ಸುರು ಆತ್.

ಅಷ್ಟ್ ಹೊತ್ತಿಗೆ ಸುಮಾರ್ ಮೂವತ್ತ್ ಮೂವತ್ತೈದ್ ವರ್ಷದ ಹೆಂಗಸ್ ಎರಡ್ ಮಕ್ಕಳ ಎಳ್ಕಂಡ್ ಬಂದ್ ಸೀಮನ ಹಕ್ಕಲೆ ಕುದ್ದಿತ್ ಅವಳ ಮೋರೆ ಹೇಳ್ತಿತ್ತ್ ಸಂಸಾರಲಿ ಯಾವ ಸುಖ ಇಲ್ಲೆ–ಂತ.

ಆ ಮಕ್ಕ ಮಿಯದೆ ಎಷ್ಟೋ ದಿನ ಆದವರ ಹಂಗೆ ನೀರ್ ಕಾಣದವರ ಹಂಗೆ ಹೊಲ್ಸ್ ಬರ್ತಿದ್ದ. ಮಕ್ಕಳಿಗೆ ಹೊಟ್ಟೆ ಇಸಿ ತಿಂಬಕೆ ಏನಾರ್ ಕೊಡ್–ಂತ ಅಮ್ಮನ ಪೀಡ್ಸ್‌ತ್ತಿದ್ದ. ಮಕ್ಕಳ ಸಮದಾನ ಮಾಡಿಕೆ ಕಷ್ಟ ಬರುವ ಸಾಹಸ, ಸೀಮನ ತಲೆ ಕೆಟ್ಟ್ ಹೋಗುವ ಹಂಗೆ ಆಗಿತ್ತ್. ಸೀಮ ಅವಳ ಕೈಲಿ ಇದ್ದ ಬಿಸ್ಕೆಟ್ ಪ್ಯಾಕೆಟ್‌ನ ಅವ್ಕೆ ಕೊಟ್ಟ್‌ಕಂಡ್ ಇದ್ದಾಂಗೆ ಕಿತ್ತ್‌ಕಂಡ ಅನ್ಸ್‌ರ ಹಿಡ್ದ್‌ವರ ಹಂಗೆ ಒಂದ್ ಗಳ್ಗೆಲಿ ತಿಂದ್ ಮುಗ್ಸಿದ. ಅವರ ಪರಿಸ್ಥಿತಿ ನೋಡಿ "ಛೇ ನನ್ನ ಜೀವನ ಒಂದ್ ತರ, ಇವರ ಜೀವನ ಒಂದ್ ತರ,

ಒಬ್ಬೊಬ್ಬರ ಪರಿಸ್ಥಿತಿ ಒಂದೊಂದ್ ತರ. ಈ ಸಮಾಜಲಿ ಯಾಕೆ ಈ ಕಥೆಗಳೆಲ್ಲ ಸರಿ ಮಾಡಿಕಂಬಕೆ ಆದ್ಲೆ? ಯಾಕೆ ಹಿಂಗೆ ಆಗ್ತಾ ಉಟ್ಟು?" ಒಂದೊಂದೆ ಪ್ರಶ್ನೆಗ ಅವಳಲ್ಲಿ ಹುಟ್ಟಿತ್. ಆ ಹೆಂಗ್‌ಸ್ ಸೀಮಾಂಗೆ ಧನ್ಯವಾದ ಹೇಳ್ತ್. "ತೊಂದರೆ ಇಲ್ಲೆ" ಮತ್ತೇನು ಹೇಳುವ ಪರಿಸ್ಥಿತಿ ಸೀಮಳ ಮನ್ಸ್‌ಗೆ ಕಂಡತ್ಲೆ. ಇದರೆಲ್ಲ ನೋಡ್ದ್ ಸೀಮಾ–ಂಗೆ ನೆನ್ಪುಗ ಮಾಲೆ ಮಾಲೆ ಆಗಿ ಬಿಚ್ಚುವ ಹಂಗೆ ಆಗಿ ನಿದಾನಲಿ ಮನೆ ಕಡೆ ನಡ್ದ್ ಅವಳ ರೂಂ ಸೇರಿಕಂಡಿತ್. ಅತ್ತಿಗೆನ ಅವತಾರ ಅಷ್ಟೊಂದ್ ಇತ್ಲೆ. ಕತ್ತಲೆನ ದೂರ ಮಾಡಿ ಬೆಳ್ಕ್ ಹರ್ದ್‌ದರ ನೋಡಿ ಸೀಮನ ಸೋತ ರಟ್ಟೆಲಿ ಹೇಳಿಕೆ ಆಗದಂತ ಶಕ್ತಿ ಬಂದಿತ್ತ್. ದಿನ ಕಳ್ದ ಹಂಗೆ ಮತ್ತೆ ಸುರು ಆತ್ ಅತ್ತಿಗೆನ ಅವತಾರ, ಮನೇಲಿ ಕುದ್ದ್ ಓದುತಿದ್ದ ಅವಳ ಆಸೆನ ಹಂಗೆ ಇದ್ದ ಪರೀಕ್ಷೆ ದಿನ ಬಂದ್ ಬುಟ್ಟತ್. ಅವಳ ಜಾಣೆ ತನನ ಉತ್ತರಲಿ ಬರ್ದಿತ್ತ್. ಪರೀಕ್ಷೆ ಮುಗ್ದ್ ಫಲಿತಾಂಶಕ್ಕೆ ಪಾರ ಕಾಯ್ತಿದ್ದ ಸೀಮನ ಜೀವನ ಸುರು ಆತ್. ಬೊಳ್ಪುಗೆ ಎದ್ದ್ ಅತ್ತಿಗೆ ಸೀಮ ಮಲ್ಗಿಗೆದಲ್ಲಿಗೆ ನೀರ್ ಹೊಯಕನ ನಂಬಿಕೆ ಆಗದ ರೀತಿಲಿ ನಿದ್ದೆ ಕಣ್ಣಲ್ಲಿ ಅತ್ತಿಗೆನ ನೋಡ್‌ತಿತ್ತ್. ಸೀಮ ಅವಳ ರೂಂ ಒಳೆಗೆ ಹೋಗಿ ಬಾಗ್‌ಲ್ ಹಾಕಂಡಿತ್ತ್. ಫೋನ್ ರಿಂಗ್ ಆತ್. ಟಿವಿ ಎದುರ್ ಕುದ್ದಕಂಡ್ ಇದ್ದ ಅತ್ತಿಗೆ ಸುಲೋಚನ ಫೋನ್ ಎತ್ತಿತ್ತ್. ಆ ಕಡೆಂದ ಮಾತಾಡುವ ಮೊನ್ನ ಸೀಮ ರಾಜ್ಯಕ್ಕೆ ಮೊದಲನೆ ಸ್ಥಾನ ಪಡ್ಕೊಂಡ್‌ಟು ಅಭಿನಂದನೆ–ಂತ ಹೇಳ್ದ. ಸೀಮನ ಪ್ರತಿಭೆನ ಗೊತ್ತ್ ಮಾಡದೇ ಹಿಂಸೆ ಕೊಟ್ಟೆ. ಅವಳ ಬಗ್ಗೆ ತಪ್ಪಾಗಿ ತಿಳ್ಕಂಡಿದ್ದೆ. ಈಗಾದ್ರ್ ಅಭಿನಂದನೆ ಹೇಳೊಕು–ಂತ ನೆನ್ಸಿ ಕುಸಿಲಿ ಅವಳ ರೂಂ ಕಡೆ ಹೋಗಿ, ಸೀಮಾ–ಂತ ಕರ್ತ್. ಅದ್ಕೆ ಉತ್ತರ ಬಾತ್ಲೆ. ಕಂಡದ್ದ್ ಎಂತ? ಫ್ಯಾನ್‌ಲಿ ನೇತಡುವ ಸೀಮನ ಶರೀರನ. ಸುಲೋಚನಂಗೆ ಸಿಡ್ಲ್ ಹೊಡ್ದಂಗೆ ಆಗಿ ಹೊಗುಳಿಕೆನ ಮಾತ್‌ಗ ಎಲ್ಲ ಗಂಟ್ಲ್ ಒಳೆಗೆನೇ ಇತ್ತ್. ಅಂದೇ ಫಲಿತಾಂಶ ಆದರೂ ನೋಡಿಕೆ ಹೋಗದೆ ಅವಸರ ಮಾಡಿಕಂಡ ಸೀಮಂಗೆ ಸಾಯುವ ದಿನ ಹಕ್ಕಲೆ ಬಂದ್ ಅಂದೇ ಸಾವು ಹಕ್ಕಲೆ ಕರ್ಕಂಡಿತ್ತ್.

* * * * * *

# ಪ್ರತಿ ಫಲ

ಹಳ್ಳದ ಕರೆಲಿ ದೊಡ್ಡ ಹಲ್ಸಿನ ಮರ. ಇಡೀ ಊರಿಗೆ ಬೊಟ್ಟು ಇಸಿದಾಂಗೆ ಕಾಂಬೊತಿತ್ತ್. ಅದರ ಅಡಿಲಿ ಕುದ್ದ ಜನಗಳ ಸಾಲ್ ಕೊರ್‌ಂಗ್‌ಗ ಕುದ್ದ ಸಾಲ್‌ನಾಂಗೆ ಕಾಂಬೊತ್ತಿದ್ದ. ತಣ್ಣನೆ ಗಾಳಿಲಿ ಇದರೆಲ್ಲ ನೋಡಿಕಂಡ್ ಜೀವನಲಿ ನಡ್ದ ಕಥೆಗಳ ನೆನ್ಪ್ ಮಾಡಿಕಂಡ್ ಸೂರ್ಯ ಕಣ್ಣ್ ಮುಚ್ಚಿ ಕುದ್ದಿತ್. ಇವನ ಅಪ್ಪ ಶ್ರೀಪತಿ. ಮೈಸೂರುಲಿ ಹೆಡ್‌ಮಾಸ್ಟ್ರ ಆಗಿದ್ದ. ಇವರ ನಡ್ತೆ, ಆಚಾರ ವಿಚಾರಗ ಸರಿಯಾಗಿ ಇದ್ದ್ ಒಬ್ಬ ಒಳ್ಳೆ ಮೊನ್ಸ ಆಗಿದ್ದ. ಇವರ ಹೆಣ್ಣ್ ಗಂಡ ಹೇಳ್ದ ಮಾತಿಗೆ ಸರಿಯಾಗಿ ನಡ್ಕ್ಂಡ್ ಇದ್ದ. ಇವ್ಕೆ ಸೂರ್ಯ, ಆರತಿ ಎರಡ್ ಮಕ್ಕ ಅಕ್ಕ ತಮ್ಮ ಒಟ್ಟಿಗೆ ಆಟ ಆಡಿಕಂಡ್ ಬೆಳ್ದ ಮಕ್ಕ. ಈ ಮಕ್ಕ ಶಾಲೆಗೆ ಹೋಗುವ ಹೊತ್ತ್‌ಲಿ ಕಾಯಿಲೆ ಹಿಡ್ದ್ ಅಮ್ಮನ ಕಳ್ಕಂಡ . ಅಮ್ಮ ಸತ್ತ ಮೇಲೆ ಅಪ್ಪ ಶ್ರೀಪತಿ ಈ ಮಕ್ಕಳಿಗೆ ಅವರ ಅಮ್ಮನ ಪ್ರೀತಿನ ಕೊಟ್ಟ್ ಯಾವ ಕೊರ್ತೆ ಇಲ್ಲದಾಂಗೆ ಸಿರಿ, ಸಂಪತ್ತ್‌ಲಿ ಬೆಳ್ಸಿದ. ಓದಿಕೆ, ಆಟಲಿ ಸೂರ್ಯ ತುಂಬಾ ಜಾಣ ಆಗಿತ್ತ್. ಮಕ್ಕ ಬೆಳ್ದ ದೊಡ್ಡವು ಆದಂಗೆ ಮಗಳಿಗೆ ಮೊದ್ವೆ ಮಾಡ್ಸಿದ ಅವಳ ಅಪ್ಪ. ಅದ್ ಅವರ ಜೋಸ್ತಿ ಕುಲಕರ್ಣಿ ಅವರ ಮಂಜ ದಿನೇಶಂಗೆ ದಾರೆ ಮಾಡಿ ಕೊಟ್ಟಿದ್ದ. ಸೂರ್ಯ ಅವನ ಅಪ್ಪನ ಆಸೆನಾಂಗೆ ಗಡಿ ಕಾಯುವ ದೊಡ್ಡ ಕೆಲ್ಸಕೆ ಸೇರಿಕೊಂಡಿತ್ತ್. ಶ್ರೀಪತಿಗೆ ಪ್ರಾಯ ಆತ್ ಇನ್ನ್ ನನ್ನ ಒಂದ್ ಕೆಲ್ಸ ಬಾಕಿ ಉಟ್ಟು–ಂತ ಸೂರ್ಯಂಗೆ ಮೊದ್ವೆ ಆಕೆ ಹೇಳ್ದ ಸುಮಾರ್ ಐದ್ ಆರ್ ವರ್ಷಗಳ ಹಿಂದೆ ಶಿಷ್ಯೆ ಆಗಿತ್ತ್ ಕುಮುದ. ಅವರ ಅಣ್ಣ ತರಿಕೆರೆಲಿ ಮಾಸ್ಟ್ರ ಆಕಂಡ್ ಇತ್ತ್. ಹೆಣ್ಣ್ ಸರಸುನ ಒಟ್ಟಿಗೆ ಸಂಸಾರ ನಡ್ಸಿಕಂಡ್ ಅಲ್ಲೇ ಕೆಲ್ಸ ಮಾಡಿಕಂಡ್ ಇರ್ತಿತ್ತ್

ಮದನ್. ಕುಮುದ ಸಣ್ಣದಿರಿಕನ ಅಪ್ಪ, ಅಮ್ಮನ ಮೋರೆ ನೋಡಿತ್ಲೆ. ಅಣ್ಣ, ಅತ್ತಿಗೆ, ಅಜ್ಜಿನ ಒಟ್ಟಿಗೆ ಅವಳ ಜೀವನ ನಡೆತ್ತಿತ್ತ್. ಅತ್ತಿಗೆ ಸರಸ್ಸು ತುಂಬಾ ಎರ್ಪೆ ಬುದ್ಧಿಂದ ಕೂಡ್ದ ಹೆಣ್ಣ್ ಆಗಿತ್ತ್. ಕುಮುದನ ಅಜ್ಜಿಗೆ ಪೆನ್ಸನ್ ದುಡ್ಡ್ ಬರ್ತಿತ್ತ್. ಆ ದುಡ್ಡುಲಿ ಐನೂರು ಸರಸ್ಸುನ ಕೈಗೆ ಅಜ್ಜಿ ಕೊಡ್ತಿದ್ದ. ಉಳ್ದ ದುಡ್ಡ್‌ನ ಪಿಳ್ಳೆಗಾಗಿ ಖರ್ಚ ಮಾಡ್‌ತ್ತಿದ್ದ. ಕುಮುದ ಓದಿಕೆ ಉದಾಸೀನ ತೋರ್ಸಿ ಬರೆ ಹತ್ತನೆ ಕ್ಲಾಸ್‌ವರೆಗೆ ಶಾಲೆಗೆ ಹೋಗಿತ್ತ್. ಶಾಲೆ ಬುಟ್ಟ ಮೇಲೆ ಮನೆಲಿ ಇದ್ದ್ ಅವಳ ಜೋಸ್ತಿ ಗುಲಾಬಿನ ಮನೆಗೆ ಹೋಗಿ ಕಾಲ ಕಳೆತಿತ್ತ್. ಅಜ್ಜಿ ಅವಳ ಎಲ್ಲಾ ಕೆಲ್ಸಗಳ ಮಾಡಿಕೊಡ್ತಿದ್ದ. ಅವಳಿಗೆ ಮೊದ್ವೆ ಆಗುವ ಪ್ರಾಯ ಆದರು ಮಕ್ಕಳಾಟಿಕೆ ಬುಟ್ಟಿತ್ಲೆ.

ಅಜ್ಜಿಗೆ ಪ್ರಾಯ ಆಗಿ ತೀರಿ ಹೋದ. ಅಲ್ಲಿಂದ ಸುರು ಆತ್ ಕುಮುದನ ನಿಜವಾದ ಜೀವನ. ಎಂಟ್ ಗಂಟೆಗೆ ಎದ್ರ್‌ವ ಕುಮುದ, ಐದ್ ಗಂಟೆಗೆ ಎದ್ರ್‌ವ ಹಂಗೆ ಆತ್.

"ಮುಂದೆನ ಹಂಗೆ ತಿಂದ್ ಹೆಬ್ಬಾವು ಬಿದ್ದ್‌ಕಂಡಂಗೆ ಬೀಳ್ದು ಅಲ್ಲ. ನಾ ಹೇಳ್ದಾಂಗೆ ಕೇಳಿಕಂಡ್ ಎಲ್ಲ ಕೆಲ್ಸಗಳ ನೀನೇ ಮಾಡೋಕು. ಇಲ್ಲದಿದ್ದರೆ ನಿನ್ನ ಗುಲಾಬಿ ಮನೆಗೆ ಹೋಗಿ ಅಲ್ಲೇ ಸಾಯಿ. ನಿಂಗೆ ಅವು ಗಂಜಿ ಕೊಡುವ"–ಂತ ಅತ್ತಿಗೆ ಇವಳ ದುಡ್ಸಿಕೆ ಸುರು ಮಾಡಿತ್ತ್. "ಓ ಅಂದ್ ನನ್ನ ಅಜ್ಜಿನ ದುಡ್ಡ್‌ನ ಆಸೆಗೆ ಯಾವ ಕೆಲ್ಸ ನಂಗೆ ಕೊಟ್ಟಿತ್ಲೆ"–ಂತ ಅತ್ತಿಗೆನ ಮಾತ್‌ಲಿ ಕುಮುದಂಗೆ ಅರ್ಥ ಆತ್.

ಕುಮುದ ಬೊದ್ಕುವ ಆಸೆಲಿ ಅತ್ತಿಗೆ ಎದ್ರಿಕೆ ಮುಂದೆ ಬೊಳ್ಪುಗೆ ಎದ್ದ್ ಎಲ್ಲಾ ಕೆಲ್ಸಗಳ ಮಾಡಿ ಮುಗ್ಸಿ ಗುಲಾಬಿ ಮನೆಗೆ ಹೋಕೆ ಅಪ್ಪಣೆ ಕೇಳ್‌ವ ಹಂಗೆ ಆತ್. "ಹೋದರೆ ಹೋಗು ನಂಗೇನ್ ಇಲ್ಲೆ. ಗಂಟೆ ನೆನ್ಪ್ ಇಸಿಕ ಮೂರು ಗಂಟೆಗೆ ಮನೆಗೆ ಬಂದ್ ಎತ್ತಕು." ಗಂಟೆಗಳ ಲೆಕ್ಕ ಹಾಕ್‌ತ್ತಿದ್ದ ಕುಮುದಳ ಮೋರೆ ಯಾಗೋಳು ಇದ್ದ ಹಂಗೆ ಇಲ್ಲದೆ ಚಪ್ಪೆ ಹಿಡ್ದ್ ಹೋಗಿತ್ತ್. "ಕುಮುದ ಏನಾತ್ ನಿಂಗೆ?" ಗುಲಾಬಿ ಕೇಳಿತ್ತ್. ಕುಮುದ ಮನೆಲಿ ನಡೆವ ವಿಷಯ ಹೇಳಿ ಮನ್ಸ್ ಹಗುರ ಮಾಡಿಕಂಬಕೆ ಮುಂದೆ ಅವಳ ಕಣ್ಣ್‌ಂದ ನೀರ್ ಹನ್ಕಿತ್. "ಗುಲಾಬಿ ನಿನ್ನ ಅಪ್ಪ ಒಟ್ಟಿಗೆ ಹೇಳಿ ನಂಗೊಂದ್ ಬೊದ್ಕುವ ದಾರಿಗೆ ಏನಾದ್ರೂ ಸಣ್ಣ ಕೆಲ್ಸ ಕೊಡ್ಸಿಕೆ ಹೇಳ್." ಬೇಡಿಕಂಡಿತ್ತ್.

ಜೋಸ್ತಿನ ಮನೆಂದ ಬಂದ ಕುಮುದ ಅವಳ ಮನೆಲಿ ಅಡ್ಗೆ ಕೆಲ್ಸ ಮಾಡಿ ಮುಗ್ಸಿ ಅಣ್ಣ ಅತ್ತಿಗೆ ಯಾಗ ಊಟ ಮಾಡುವೆ–ಂತ ನಾಯಿ ಗಂಜಿಗೆ ಪಾರ ಕುದ್ದ ಹಂಗೆ ಕುದ್ರುವ ಪರಿಸ್ಥಿತಿ ಅವಳದ್ದಾಗಿತ್ತ್. ಒಂದು ಮೂಲೆಲಿ ಕುಮುದ ಕುದಿತ್ತ್. ಅತ್ತಿಗೆ ಅಣ್ಣ ಊಟ ಮಾಡಿಕೆ ಸುರು ಮಾಡ್ದ.

"ಇಂದ್‌ನ ಅಡ್ಗೆ ಕೆಲ್ಸ ಕುಮುದ ಮಾಡ್ದ್." ಹೆಣ್ಣ್‌ನ ಮಾತ್‌ಗೆ, "ಓ ನಾಳೆಂದ ಈ ಮನೆಲಿ ಕೆಲ್ಸಕೆ ಇದ್ದವಳ ಬಾದು ಬೇಡ–ಂತ ಹೇಳ್ ಅವಳೇ ಎಲ್ಲ ಮಾಡ್ದು. ಕುಮುದನ ಕೆಬಿ ಅಣ್ಣನ ಮಾತ್‌ನ ಆಲಿಸ್ತ್. ಹನ್ನೆರಡ್ ಗಂಟೆ ನೆಡಿರ್ಲ್ ಮುಟ್ಟ ಎಲ್ಲ ಕೆಲ್ಸಗಳ ಮಾಡಿ

## ಹೊಸ ಬೊದ್ಕು

ಮೊಂದ್ರಿ ಕಾಂಬಕೆ ಹೋಗುವ ಕುಮುದ–ಂಗೆ "ಛೇ ನನ್ನ ಅಪ್ಪ, ಅಮ್ಮ, ಅಜ್ಜಿ ಇರ್ತಿದ್ದರೆ. ನನ್ನ ಕಣ್ಣಲಿ ಕೆಬಿಲಿ ಇಂತ ಕಷ್ಟಗಳ ಕಾಂಬಕೆ, ಕೇಳಿಕೆ ಆಕಿತ್ಲೆ. ಅಪ್ಪ ಅಮ್ಮನ ಮೋರೆ ನೋಡದೇ ಇದ್ದರೂ ಪ್ರೀತಿಲಿ ಬೆಳ್ಸಿದ ಅಜ್ಜಿನ ದುಡ್ಡ್‌ನ ಹಾಂಕಾರಲಿ ಇಂದ್ ಇವು ಮೆರ್ದ್‌ವೆ. ನನ್ನ ಅಣ್ಣಂಗೆ ರಕ್ತ ಸಂಬಂದದವು ಬೇಡ–ತ. ಮರ್ಗ್ಯಕಂಡ್ ನಿದ್ದೆಗೆ ಬಿದ್ದದೆ. ಮಾರನೆ ದಿನ ಮಾಮೂಲಿ ಕೆಲ್ಸಗಳ ಮುಗಿಸಿ ಗುಲಾಬಿ ಮನೆಗೆ ಹೋದ ಕುಮುದ–ಂಗೆ ಬೇಜಾರ್‌ನ ಒಟ್ಟಿಗೆ ಕುಸಿನ ಗಾಳಿ ಬೀಸಿತ್ತ್. ಗುಲಾಬಿ ಅವಳ ಅಪ್ಪ, ಅಮ್ಮಂಗೆ ಒಬ್ಬಳೇ ಮಗಳ್ ಆಗಿತ್ತ್. ಅವ್ಕೆ ನಾಲ್ಕೈದ್ ಬಟ್ಟೆ ಅಂಗಡಿ ಇತ್ತ್. ಅಪ್ಪನ ಒಟ್ಟಿಗೆ ಕುಮುದನ ಕಷ್ಟಗಳ ಹೇಳಿ. ಅವಳ ಅವರದ್ದೆ ಆದ ಒಂದು ಅಂಗಡಿಗೆ ಇವಳ ನಿಲ್ಸಿದ. ಅಲ್ಲಿ ತಿಂಗಳಿಗೆ ಒಂದುವರೆ ಸಾವಿರ ಇವಳ ಕೈಗೆ ಸಂಬಳ ಸಿಕ್ಕ್‌ತ್ತಿತ್ತ್. ಐನೂರು ಅತ್ತಿಗೆ ಕೈಗೆ ಪುರುಸೊತ್ತು ಇಲ್ಲದ ಕಾರಣ ಕೆಲ್ಸದ ಹೆಂಗ್ಸ್‌ಗೆ ಐನೂರು ಕೊಟ್ಟ್ ಉಳ್ದ ಐನೂರು ಇವಳ ಕೈ ಖರ್ಚಿಗೆ ಇಸಿಕಣ್‌ತಿತ್ತ್.

ಕುಮುದನ ಮನೆವು ಕೊಡುವ ಕಷ್ಟಗಳ ಅವಳ ಪರಿಸ್ಥಿತಿ ನೋಡ್ದ ಶ್ರೀಪತಿ ನನ್ನ ಶಿಷ್ಯೆನು ಹೌದು.. ಪಾಪದ ಗೂಡೆ, ಹೌದು ಇವಳ ನಮ್ಮ ಸೊಸೆ ಆಗಿ ಮಾಡಿಕೊಂಡರೆ ಅವಳ ಜೀವನಕ್ಕೆ ಕಷ್ಟ ಆಕಿಲೆ–ಂತ ನಮ್ಮ ಮನೆ ಬೆಳ್ಗಿದಾಂಗೆ ಆದೆ–ಂತ ನೆನ್ಸಿ ಅವಳ ಅಣ್ಣ ಮದನ್‌ನ ಒಟ್ಟಿಗೆ ಮಾತಾಡಿ ಯಾವ ಚಿನ್ನ, ಬೊದಿ ಕೇಳದೆ ಮಂಜ ಸೂರ್ಯನ ಒಟ್ಟಿಗೆ ಹೇಳಿ ಇವರ ಮೊದ್ವೆ ನಡ್ತ್.

ಹಂಞ ವರ್ಷ ಇವು ಗಂಡ, ಹೆಣ್ಣ್, ಮಾವಂತ ಲಾಯ್ಕಲಿಇದ್ದ್ ಸಂಸಾರ ನಡ್ಸಿ ಹೆಣ್ಣ್ ಕೂಸ್ ಆಗಿತ್ತ್ ಕುಮುದ–ಸೂರ್ಯಂಗೆ. ಕುಮುದನ ಮಾತ್ ಮೀರಿ ಗಂಡ ಆಗಲೀ, ಮಾಂವ ಆಗಲೀ ಏನೂ ಹೇಳ್ತಿತ್ಲೆ. ಕುಮುದನ ಪ್ರೀತಿಲಿ ನೋಡಿಕಂಣ್‌ತ್ತಿದ್ದ ಅವರ ಮನ್ಸ್‌ಗೆ ಕುಸಿ ತಂದ್ ಕೊಟ್ಟಿತ್ ಕುಮುದ. ದಿನ ಕಳ್ದಾಂಗೆ ಕುಮುದನ ಸ್ವಂತ ಬುದ್ಧಿ ತುಂಬಿ ಹರೆತ್ತಿತ್ತ್. ಅವಳ ಪಿತೂರಿ ಜಾಸ್ತಿ ಆಗಿ ಗಂಡನ ಆರ್ಮಿಂದ (ಆರ್ಮಿಂದ) ಬುಡ್ಸಿತ್ತ್. ಅಲ್ಲಿಂದ ಬುಟ್ಟ್ ಬಂದ ಸೂರ್ಯ ಬ್ಯಾಂಕ್‌ಲಿ ಕೆಲ್ಸಕ್ಕೆ ಸೇರಿಕಂಡಿತ್ತ್. ಅವನ ಜೋಸ್ತಿ ಶೇಖರ ಆಗಾಗ ಇವರ ಮನೆಗೆ ಬರ್ತಿತ್ತ್. ಕುಮುದ ಮತ್ತೆ ಶೇಖರ ಇಬ್ಬರ ನಡುವೆ ಪ್ರೀತಿ ಹುಟ್ಟಿತ್ತ್. ಶೇಖರನ ನೊಣೆ ಮಾತಿಗೆ ಮೊರ್ಲು ಆದ ಕುಮುದ ಉಪಾಯಂದ ಮಾವನ ಆಸ್ತಿನ ಶೇಖರನ ಸಹಾಯ ಪಡ್ದ್ ಅವಳ ಹೆಸರ್‌ಗೆ ಬರ್ಸಿಕಂಡ್ ಗಂಡ ಮಾವನ ಮಾತಿಗೆ ಏನೂ ಬೆಲೆ ಕೊಡದ ರೀತಿಲಿ ಇವಳ ವರ್ತನೆ ಆಗಿತ್ತ್. ಹೆಣ್ಣ್‌ನ ವರ್ತನೆ ಗೊತ್ತಾದ ಸೂರ್ಯ ಕೆಟ್ಟ ಚಟಕ್ಕೆ ಮಾರು ಹೋಗಿ ಸರಿಯಾಗಿ ಮನೆಗೆ ಬಾರದೆ ಕುಡ್ದ್ ಕಂಡ ಕಂಡಲ್ಲಿ ಬೀಳ್ತಿತ್ತ್. ಸೊಸೆನ ಗತ್ತ್, ಮಂಜನ ಸಂಕಟ, ಮಂಜನ ಸಂಕಟ ನೋಡಿ ಶ್ರೀಪತಿನ ಮನ್ಸ್‌ಲಿ ಹೇಳಿಕಾಗದ ಬೇನೆ ಕಂಡ್ ಬಾತ್. ಪಾಪ ತಬ್ಬುಲಿ, ಕೂಸುಗೆ ಯಾರೂ ಇಲ್ಲೆ ಅವಳ ಅತ್ತಿಗೆ ಕೊಡುವ ಕಷ್ಟಗಳ ನೋಡಿ ನನ್ನ ಮನ್ಸ್‌ಗೆ ಬೇಜಾರ್ ಆಗಿ

ನನ್ನ ಚಿನ್ನದಂತ ಮಂಜಂಗೆ ಇವಳ ಮೊದ್ವೆ ಮಾಡ್ಸಿದೆ. ಈಗ ನನ್ನ ಮಂಜನ ನಾ ಹಾಳ್ ಮಾಡಿಕಂಡೆ. ಶ್ರೀಪತಿ ಆಗಾಗ ಮಡ್ಡಿಕೆ ಸುರು ಮಾಡ್ದ.

ಕುಮುದ ಮಾವನ ಸರಿಯಾಗಿ ನೋಡಿಕಣದೆ ನಿಮ್ಮ ಚಾಕ್ರಿ ಮಾಡಿಕೆ ನಾ ಬಂದದ್ದ್ ಅಲ್ಲ. ನಿಮ್ಮ ಪ್ರೀತಿ, ವಿಶ್ವಾಸ ನಂಗೆ ಬೇಕಾಗಿಲ್ಲೆ. ಕಡ್ಡಿ ಮುರ್ದಾಂಗೆ ಹೇಳ್ತ್. ಹಂಞ ದಿನಲಿ ಶ್ರೀಪತಿನ ಜೀವನ ವೃದ್ಧಾಶ್ರಮಲಿ ನಡ್ಸುವಂಗೆ ಆತ್.

ಅಪ್ಪನ ಜೀವನ ಆಶ್ರಮಲಿ ಕಳಿದರ ನೋಡಿ ಹಗ್‌ಲ್ ಯಾದ್ ಕತ್ತಲೆ ಯಾದ್‌ತ ಗೊತ್ತಾಗದೆ ಮಂಜ ಊರುರ್ ತಿರ್‍ಗಿ ಕಾಲ ಕಳಿವಂಗೆ ಆತ್.

ಬ್ಯಾಂಕ್ ಕೆಲ್ಸನ ಸರಿಯಾಗಿ ಮಾಡದೆ ಅಲೆತ್ತಿದ್ದವನ ಕೆಲ್ಸಂದ ವಜ ಮಾಡ್ದ. ಆ ಹೊತ್ತ್‌ಲಿ ಕುಮುದ ಆಸ್ತಿನ ಮಾರಿ ಸಿಕ್ಕಿದ ದುಡ್ಡುಲಿ ಶೇಖರನ ಒಟ್ಟಿಗೆ ಇಂಗ್ಲೆಂಡ್‌ಗೆ ಹಾರ್‍ತ್.

ಆದ್ರೆ ಶೇಖರ ಮಾಡುವ ಕುತಂತ್ರ ಇವಳ ತಲೆಗೆ ಹುಕ್ಕತ್ಲೆ. ಶೇಖರನ ಕೈಗೆ ದುಡ್ಡು ಸಿಕ್ಕಿ ಮೊರ್‍ದಿನ ಗುರ್ತು ಪರ್‍ಚಿಯ ಇಲ್ಲದವರ ಹಂಗೆ ಕುಮುದನ ಬುಟ್ಟ್ ಪರಾರಿ ಆತ್. ಅವಂಗಾಗಿ ಎಲ್ಲ ಕಡೆ ಹುಡ್ಕಾಟ ನಡ್ಸಿತ್ ಈಗ ಮಾಡ್ದ ತಪ್ಪುನ ಅರ್ಥ ಅವಳಿಗೆ ಗೊತ್ತಾತ್. ದೇವರಂತ ಮನ್ಸ್‌ನ ಮಾವನ ಮತ್ತೆ ಗಂಡನ ಭಾಗ್ಯನ ಕಳ್ಕಂಡೆ ಒಟ್ಟಿಗೆ ಹೂವುನ ಹಾಂಗೆ ಇರುವ ಕೂಸುನ ಕಳ್ಕಂಡ್ (ತಬ್ಬುಲಿ) ಈ ಬೀದಿ ನಾಯಿನ ಬಲೆಗೆ ಬಿದ್ದೆ. ನಾ ಮಾಡ್ದ ತಪ್ಪುಗೆ ಬೊದ್ಕಿ ಪ್ರಯೋಜನ ಇಲೆ. ಕುಮುದ ಸಾವುನ ಕಡೆಗೆ ಮೋರೆ ಮಾಡ್ತ್.

ಅಪ್ಪನ ನೋಡುವ ಆಸೆಂದ ವೃದ್ಧ ಆಶ್ರಮದ ಕಡೆಗೆ ನಡ್ದ ಸೂರ್ಯ ಮನೆಗೆ ಅಪ್ಪನ ಕರ್‍ಕಂಡ್ ಬಾತ್. ಕೆಟ್ಟ ಚಟಂದ ದೂರಾದ ಮಂಜನ ಒಟ್ಟಿಗೆ ಪಿಳ್ಳಿನ ಒಟ್ಟಿಗೆ ಜೀವನ ನಡ್ಸಿದ ಶ್ರೀಪತಿ. ಅಪ್ಪನ ಆಸೆನಂಗೆ ಮತ್ತೆ ದೇಶದ ಸೇವೆಗೆ ಸೇರಿ ಕೆಟ್ಟ ಹೆಣ್ಣ್‌ನ ಮೋರೆ ನೋಡ್ದಕಿಂತ ನಮ್ಮ ದೇಶ ಸೇವೆ ಮಾಡ್ರೆ ಅದ್ಕೆಂದ ದೊಡ್ಡ ಸೇವೆ ಯಾವ್ದು ಇಲ್ಲೆಂತ ಸೂರ್ಯ ಮಿನ್ಗಿತ್.

* * * * * *

# ಮೀನ್ ರಾಜಕುಮಾರ

ಒಂದ್ ಊರುಲಿ ಒಬ್ಬ ರಾಜಕುಮಾರ.ಆ ರಾಜಕುಮಾರಂಗೆ ಮೊದುವೆ ಆಗುವ ಪ್ರಾಯ ಆಗಿತ್ತ್.ರಾಜ ಕುಮಾರನ ಅಪ್ಪ ಒಳ್ಳೆ ಸಂಬಂಧನ ಹುಡ್ಕಿದ. ಆ ಗೂಡೆ ಬಾರಿ ಪೊರ್ಲುನ ಸುಂದರಿ ಆಗಿತ್ತ್.ಆ ಗೂಡೆನ ಮನೆವು ರಾಜಕುಮಾರನ ಮನೆಸ್ಥನಕೆ ಸರಿ ಆಗಿದ್ದ.ಆಳುಗಳ ಕೈಲಿ ಇಡೀ ಊರಿಗೆ ಡಂಗೂರ ಸಾರ್ಸಿದ.ಅರಮನೆ, ಆನೆ, ಕುದುರೆಗಳ ಸಿಂಗಾರ ಮಾಡ್ಸಿದ.ಮೊದುವೆಗೆ ದಿನ ಬಾತ್ ಇಡೀ ಊರಿಗೆ ಊರೇ ಸೇರಿ ಮೊದುವೆ ನಡ್ದ್ ಹೋತ್.ಮೊದುವೆನ ಬಾರೀ ಆಡಂಬರಲಿ ಮಾಡಿ ಏನ್ ಪ್ರಯೋಜನ?ರಾಜಕುಮಾರಿನ ಮನ್ಸ್‌ಲಿ ಮಕ್ಕ ಇಲ್ಲದ ಬೇಜಾರ್.ಮಂತ್ರಿ ಕೂಲಿ ಆಳುಗಳ, ಮಕ್ಕಳ ನೋಡುಕನ ರಾಜಕುಮಾರಿನ ಮನ್ಸ್‌ಗೆ ಬೇನೆ ಆಗ್‌ತ್ತಿತ್ತ್.

"ನಾವ್ಗೂ ಮಕ್ಕ ಇದ್ದಿದ್ದರೆ!ನಾವು ಎಷ್ಟ್ ಕುಸಿಲಿ ಇರಕಾಯ್ತ್?ಇಂತ ಭಾಗ್ಯ ಯಾಗ ಬಂದದೆ"–ಂತ ಸಂಕಟ ಆಗ್‌ತ್ತಿತ್ ಗಂಡ ಹೆಣ್ಣ್‌ನ ಮನ್ಸ್‌ಗೆ.

ಕೂಸುನ ಆಸೆಗಾಗಿ ಎಷ್ಟೋ ಯಜ್ಞ ಯಾಗಗಳ ಮಾಡ್ಸಿ ಎಷ್ಟೋ ದೇವ್ರುಗೆ ಹರ್ಕೆ ಹೇಳಿಕಂಡ್, ಇಡೀ ಊರಿಗೆ ದಾನ ಧರ್ಮಗಳ ಮಾಡ್ತಿದ್ದ.

ಒಂದ್ ದಿನ ಅದೇ ಊರಿಗೆ ಕಣಿ ಹೇಳಿಕಂಡ್ ಬಂದ ಹೆಂಗಸ್‌ನ ಸುದ್ದಿ ರಾಜಕುಮಾರಿಗೆ ಆಳ್‌ಗ ತಿಳ್ಸಿದ ರಾಜಕುಮಾರಿ ರಾಜಕುಮಾರನ ಒಟ್ಟಿಗೆ ಹೇಳ್ತ್.ರಾಜಕುಮಾರ ಹೆಣ್ಣ್‌ನ ಮನ್ಸ್‌ಗೆ ಬೇನೆ ಆಗದ ಹಂಗೆ ಒಪ್ಪಿಕಂಡ್ ಆಳುಗಳ ಕೈಲಿ ಹೇಳಿ ಕಳ್ಸಿ ಅವಳ ಅರಮನೆಗೆ ಬರುವ ಹಂಗೆ ಮಾಡ್ದ. ರಾಣಿನ ಕೈ ನೋಡಿಕೆ ಅಪ್ಪಣೆ ಮಾಡ್ತ್. ನೀವ್ಗೆ ಮಕ್ಕ ಇಲ್ಲದ

ಚಿಂತೆ, ಇನ್ನ್ ಒಂದ್ ವರ್ಷಲಿ ನೀವು ಸಂಸಾರ ಪಡ್ದ್‌ರೆ.ಮನುಷ್ಯನ ರೂಪ ಆಗಿರ್ದುಲೆ ನೀವು ಯಾವ ಬೇಜಾರ್ ಮಾಡದೆ ಮನ್ಸ್‌ಲಿ ದೈರ್ಯ ತಕಂಡ್ ಇದ್ದರೆ ಸಂಸಾರ ಬೆಳೆಯಕೆ ಸಾಧ್ಯ. ಆ ಜಿವನ ಮೊದುವೆ ಆಗುವ ಗೂಡೆ ಧೈರ್ಯ ತಂದ್‌ಕಂಡರೆ ನಿಮ್ಮ ಸಂಸಾರ ಬೆಳ್ದದೆ. ಕೈ ನೋಡಿ ಹೇಳ್ತ್. ರಾಜ, ರಾಣಿಗೆ ಕುಸಿನ ಒಟ್ಟಿಗೆ ಬೇಜಾರದ ಸಂಗತಿ ಆಗಿತ್ತ್. ಆ ಹೆಂಗ್‌ಸ್‌ಗೆ ಬೇಕಾದಂಗೆ ಎಲ್ಲ ಕೊಟ್ಟ್ ರಾಜನ ಅರಮನೆಯಿಂದ ಕಳ್ಸಿಕೊಟ್ಟ.

ನಾವ್ಗೆ ಯಾವ ತರದ ಕೂಸು! ನಮ್ಮ ಕಣ್ಣಿಗೆ ಕಾಂಬೊದು?ಹಗಲ್–ರಾತ್ರಿ ಇದುವೆ ರಾಣಿನ ಮನ್ಸ್‌ಲಿ ಆಗಿತ್ತ್. ಆಲೋಚನೆಲಿ ದಿನ ಕಳ್ದ್ ರಾಣಿಗೆ ಒಂಭತ್ತ್ ತಿಂಗ ಕಳ್ದ್ ಹೆರಿಗೆ ಆತ್.ಆ ಕೂಸು ಮೀನ್‌ನ ರೂಪಲಿ ಇತ್ತ್.ಈ ಸುದ್ದಿ ಇಡೀ ಊರ್‌ಂದ ಊರಿಗೆ ಸುದ್ದಿ ಹಬ್ಬಿ, ಇದ್ ಯಾರೂ ನಂಬದಂತ ಸುದ್ದಿ ಆಗಿತ್ತ್.ಆ ಕೂಸುನ ನೋಡಿಕೆ ಜನಗಳ ಜಾತ್ರೆ ತುಂಬಿ ಹೋಗಿತ್ತ್. ಬಂದ್ ನೋಡ್ದ ಜನಗಳಿಗೆ ಅಚ್ಚರಿನ !ಸಂಗತಿಯಾಗಿ ಕಂಡಿತ್ತ್.

ಇನ್ನ್ ಈ ಮೀನ್‌ಕುಮಾರನ ಬೆಳ್ಸಿಕೆ ಬೇಕಾಗಿ ಆ ಮೀನ್‌ನ ಒಂದ್ ಪಾತ್ರೆಲಿ ಹಾಕಿ ಇಸಿದ. ಮೀನ್‌ಗೆ ಮಕ್ಕಳಿಗೆ ಯಾವ ತರಲಿ ತಿಂಬಕೆ, ಉಂಬಕೆ ಕೊಟ್ಟವೆ ಅದೇ ತರಲಿ ಕೊಟ್ಟ್ ಮೀನ್ ಬೆಳ್ದ ಹಂಗೆ ಕಡಾಯಕೆ ಹಾಕಿ ಸಾಂಕಿಕೆ ಸುರು ಮಾಡ್ದ. ಮೀನ್ ಬೆಳ್ದ್ ದೊಡ್ಡದಾತ್.ಮತ್ತೆ ದೊಡ್ಡ ಕೆರೆ ತೆಗ್ಸಿ ಆ ಕೆರೆಲಿ ಹಾಕಿ ಸಾಂಕಿದ.ಹಿಂಗೆ ಸಾಂಕಿದ ಆ ವರ್ಷ ಇಡೀ ಊರುಲಿ ನೀರಿಗೆ ಬರಗಾಲ ಬಾತ್.ಎಲ್ಲಾ ಹೆಣ್ಮಕ್ಕ ಆ ಕೆರೆಗೆ ನೀರಿಗೆ ಹೋಕನ "ನಂಗೆ ಮೊದುವೆ ಆಗುವ ಪ್ರಾಯ ಆತ್, ನಂಗೆ ಮೊದುವೆ ಆಕು"ಂತ ನೀರ್‌ನ ಒಳಗೆಂದ ಗಂಡ್‌ಸ್ಸ್‌ನ ಸ್ವರ ಕೇಳಿ ಬರ್ತಿತ್ತ್.ಈ ವಿಷಯನ ರಾಣಿ ಮತ್ತೆ ರಾಜಂಗೆ ತಿಳ್ಸಿದ. "ರಾಜ ಮೀನಿಗೆ ಯಾರ್ ಹೆಣ್ಣ್ ಕೊಡಿಕೆ ಒಪ್ಪುವೆ" ಂತ ನೆನ್ಸಿಕಂಡ್ ಮೀನ್‌ಗೆ ಮೊದುವೆಂತ ಡಂಗೂರ ಸಾರ್ಸಿದ. ಎಲ್ಲವುಕೆ ಅಚ್ಚರಿ! ಆತ್. "ಛೆ ಈ ರಾಜ–ಂಗೆ ಏನಾವುಟು? ಎಲ್ಲಿ ಆದ್ರೂ ಮೊದುವೆ ಮಾಡ್ಸುವೆನಾ! ಯಾರ್ ಹೆಣ್ಣ್ ಕೊಟ್ಟವೆ?"ಇಡೀ ಜನಗಳ ಬಾಯಿಲಿ ಮಾತ್ ಬರ್ತಿತ್ತ್.ಹೆಣ್ಣ್ ಹುಡ್ಕಿರೂ ಎಲ್ಲರು ಹಿಂದೆ, ಮುಂದೆ ನೋಡ್‌ತಿದ್ದ.ಕಡೆಗೆ ಒಬ್ಬ ಕೂಲಿ ಕೆಲ್ಸ ಮಾಡುವ ಅಪ್ಪಂಗೆ ಏಳ್ ಜನ ಹೆಣ್ಮ್‌ಕ್ಕ ಇದ್ದ್. ಒಂದು ಗೂಡೆನ ಮಾತ್ರ ಮೊದುವೆ ಮಾಡಿ ಕೊಟ್ಟಿದ್ದ.ಇನ್ನ್ ಈ ಆರು ಹೆಣ್ಮಕ್ಕಳ ಕೊಡಿಕೆ ಕಷ್ಟಲಿ ಇದ್ದ್ ಅವನ ಮಗಳ ಕೊಡಿಕೆ ಒಪ್ಪಿಕೊಂಡಿತ್ತ್.ಮಗಳಿಗೆ ಮೀನ್‌ನ ಮೊದುವೆ ಆಕೆ ಮನ್ಸ್ ಇತ್ಲೆ.ಒತ್ತಾಯಲಿ ಮಗಳ ಒಪ್ಪಿಸಿ ಮೊದುವೆಗೆ ಸಿದ್ದತೆ ಆತ್.ಮೊದುವೆ ಸುದ್ದಿ ಎಲ್ಲವುಕೆ ಗೊತ್ತಾತ್.ಮೀನ್‌ಗೆ ಹೆಂಗೆ ಮೊದುವೆ ಮಾಡ್ಸುವೆ–ಂತ ಜನಗಳ ಜಾತ್ರೆನೇ ಸೇರಿತ್ತ್.ಗೂಡೆನ ಪೊರ್ಲುಲಿ ಸಿಂಗಾರ ಮಾಡಿ ಕೆರೆನ ದಂಡೆ ಮೇಲೆ ಕುದ್ರಿಸಿ, ನೀರ್ ಒಳಗೆ ಇದ್ದ ಮೀನ್ ರಾಜಕುಮಾರನ ಕರ್ದ್ ಎಲ್ಲ ಕ್ರಮದಾಂಗೆ ಮೊದುವೆ ಮಾಡ್ಸಿದ.ಹಂಞ ನೀರ್‌ಗೆ ಇಳ್ದ ಆ ಗೂಡೆನ ತಿರ್‌ಗಿ ನೋಡ್‌ಕನ ಆ ಗೂಡೆ ಮಾಯ ಆತ್, ಗೂಡೆನ ಅಪ್ಪಂಗೆ ಯಾವ ಬೇಜಾರ್ ಆತ್ಲೆ. "ಒಂದ್ ಮಗಳ ಕೊಡುವ ತಲೆ ಬಾರ ಮುಗ್ತ್"ಂತ ಕುಸಿಲಿ ಇದ್ದ. ಯಾಗೋಳ್‌ನ ಹಂಗೆ ನೀರ್‌ಗೆ ಹೆಣ್ಮಕ್ಕ

ಹೋಕನ ಮುಂದೆನ ಹಂಗೆ ಕರ್ದ್ ಹೇಳುವ ಸ್ವರ ಮತ್ತೆ ಮತ್ತೆ ಕೇಳಿ ಬರ್ತಿತ್ತ್. ಮತ್ತೊಂದ್ ಮಗಳ ಮೀನ್‌ಗೆ ಕೊಡಿಕೆ ಒಪ್ಪಿಕೊಂಡಿತ್ ಅವಳ ಅಪ್ಪ. ಆ ಗೂಡೆ ಒಪ್ಪಿತ್ಲೆ. "ಅಕ್ಕನ ಮೊದುವೆ ಮಾಡಿ ಕೊಟ್ಟ. ಆದರೆ ಅವಳ ನೋಡುವ ಭಾಗ್ಯ ನಾವ್ಗೆ ಇಲ್ಲೆ. ಇನ್ನ್ ನನ್ನ ಮೊದುವೆ ಮಾಡ್ಸಿರೆ ನನ್ನ ಕಥೆನೂ ಅಷ್ಟೇ." ಅವಳ ಬೇಜಾರ್‌ನ ಅವಳ ಅಪ್ಪನ ಒಟ್ಟಿಗೆ ಹೇಳ್ತ್.

ಅಪ್ಪನ ಸಿಟ್ಟ್ ನೆತ್ತಿಗೇರಿ, "ಮೊದುವೆಗೆ ಒಪ್ಪದಿದ್ದರೆ ನಾಳೆ ನಿನ್ನ ತಲೆ ಕಡ್ಸುದ್ ಗ್ಯಾರಂಟಿ" ಮಗಳ ಹೆದ್ರಿಸಿ ಹಠ ಮಾಡ್ಸಿ ಒಪ್ಪುವ ಹಂಗೆ ಮಾಡ್ತ್.ಮೊದ್ವೆಗೆ ಒಂದೇ ದಿನ ಒಳದ್ ಅಂದ್ ಗೂಡೆಗೆ ಬೇಜಾರಾಗಿ ಮೊರ್ಟಿತ್ತ್. ಈ ಗೂಡೆನ ಬೇಜಾರ್‌ನ ತಿಳ್ಕಂಡ, ಈಶ್ವರ ಪಾರ್ವತಿ ದೇವ್ರು ಇವಳಿಗೆ ಪ್ರತ್ಯಕ್ಷ ಆದ. ಗೂಡೆನ ಒಟ್ಟಿಗೆ ಪಾರ್ವತಿ ದೇವಿ ಕೇಳ್ತ್ "ಯಾಕೆ ನೀ ಮರ್ಡ್ತ ಒಳ?ಏನಾತ್ ನಿಂಗೆ?" "ಅಕ್ಕನ ಮೀನ್‌ಗೆ ಮೊದುವೆ ಮಾಡ್ಸಿ ಕೊಟ್ಟ ಆ ಮೀನ್ ಅಕ್ಕನ ತಿಂದ್ ಮುಗ್ಸಿತ್. ಈಗ ನನ್ನ ಅದೇ ಮೀನ್‌ಗೆ ಮೊದುವೆ ಮಾಡಿಕೆ ನನ್ನ ಅಪ್ಪ ನನ್ನ ಹೆದ್ರಿಸಿ ಒಪ್ಪುವ ಹಂಗೆ ಮಾಡ್ದ್. ನಾ ಮೊದುವೆ ಆಗದಿದ್ದರೆ ನನ್ನ ತಲೆನ ನಾಳೆ ಕಡ್ಸುವೆ. ಮೀನಿಗೆ ನನ್ನ ಮೊದುವೆ ಮಾಡಿರೆ ನಾ ಬೊದ್ಕುವ ಸ್ಥಿತಿಲಿ ಇಲ್ಲೆ.ನನ್ನ ಕೂಡ ತಿಂದ್ ಮುಗ್ಸಿದೆ."ಗೂಡೆ ಪಾರ್ವತಿನ ಒಟ್ಟಿಗೆ ಹೇಳ್ತ್.ಆಗ ಪಾರ್ವತಿ ದೇವಿ ಗೂಡೆನ ಕೈಗೆ ಎಲೆ, ಅಡ್ಕೆನ ಕೊಟ್ಟ್ "ನಿನ್ನ ಮೊದುವೆ ಆಗಿ ನಿನ್ನ ನೀರಿಗೆ ಇಳ್ಸುಕನ ಒಂದ್ ಆರ್ಭಟೆ ಕೇಳ್ದು.ಆಗ ಒಮ್ಮೆ ಎಲೆ, ಅಡ್ಕೆನ ನೀರ್‌ಗೆ ಹಾಕ್.ಮತ್ತೊಂದ್ ದೊಡ್ಡ ಆರ್ಬಟೆ ಕೇಳ್‌ಕನ ಎಲೆ, ಅಡ್ಕೆ ಹಾಕ್.ಮತ್ತೆ ನಿನ್ನ ತಿಂದ್ ಮುಗ್ಸಿನೇ–ಂತ ಹಕ್ಕಲೆ ಬಾಕನ ನಿನ್ನ ಕೈಲಿ ಇದ್ದ ಎಲೆ, ಅಡ್ಕೆನ ಎಲ್ಲ ಹಾಕ್"–ಂತ ಹೇಳಿ ಈಶ್ವರ, ಪಾರ್ವತಿ ಮಾಯ ಆದ.

ಮಾರನೆ ದಿನ ಗೂಡೆನ ಸಿಂಗಾರ ಮಾಡಿ ಕೆರೆ ಹಕ್ಕಲೆ ಕರ್ಕಂಡ್ ಹೋಕನ ಈ ಗೂಡೆ ಎಲೆ, ಅಡ್ಕೆನ ಕೈಲಿ ಹಿಡ್ಕಂಡಿತ್ತ್.ಗೂಡೆನ ಕೆರೆ ದಂಡೆಲಿ ಕುದ್ರಿಸಿ ಮೀನ್‌ನ ಕರ್ದ್ ಕ್ರಮ ಪ್ರಕಾರ ಮೊದುವೆ ಮಾಡ್ದ. ಗೂಡೆ ಧೈರ್ಯಲಿ ನೀರ್‌ಗೆ ಇಳ್ತ್. ಆಗಳೇ ಆರ್ಭಟೆ ಕೇಳಿಕೆ ಸುರು ಆಕನ ಅವಳ ಕೈಲಿ ಇದ್ದ ಎಲೆ ಅಡ್ಕೆನ ನೀರ್‌ಗೆ ಹಾಕಿತ್. ಆರ್ಭಟೆ ಕೇಳ್‌ಕನ ಜನಗಳ ಹೊಟ್ಟೆ ನಡ್ಗಿಕೆ ಸುರು ಆತ್.ಈ ಮೀನ್ ಗೂಡೆನ ನುಂಗಕೆ ಬಂದಾಂಗೆ ಬಾತ್.ಬಾಕನ ಕೈಲಿ ಇದ್ದ ಎಲ್ಲ ಎಲೆ ಅಡ್ಕೆನ ನೀರ್‌ಗೆ ಹಾಕಿತ್.ಆಗ ಆ ಮೀನ್ ಮೊನ್ಸ್‌ನ ರೂಪ ಆಗಿ ರಾಜಕುಮಾರನ ಹಂಗೆ ಎಲ್ಲವರ ಕಣ್ಣ್‌ಗೆ ಕಂಡತ್ತ್.ಇಡೀ ಊರೊಕ್ಕೆ ಆ ಗೂಡೆನ ಧೈರ್ಯ ಕಂಡ್ ಕುಸಿ ಆಗಿ ಎಲ್ಲವೂ ಅವಳ ಹೊಗುಳಿಕೆ ಸುರು ಮಾಡ್ದ. ರಾಜನಾಗಿ ಕಂಡ ಮೀನ್ ಕುಮಾರ, ಮತ್ತೆ ರಾಣಿ ಇಬ್ಬರ ಜೀವನ ಎಲ್ಲವರ ಹಂಗೆ ಸುರು ಆತ್. ಲಾಯ್ಕಲಿ ಸಂಸಾರ ಮಾಡಿಕೆ ಸುರು ಮಾಡ್ದ್.

ರಾಣಿಗೆ ಈಗ ನವಮಾಸ ತುಂಬಿ ಅಪ್ಪ, ಮಗಳ ಹೆರಿಗೆಗೆ ಕರ್ಕಂಡ್ ಹೋದ. ಈಗ ಆ ಮನೆಲಿ ಅಕ್ಕನ ಮುಂದೆ ಬೇರೆಕ್ಕೆ ಮೊದುವೆ ಮಾಡಿ ಕೊಟ್ಟ ಗೂಡೆ ಕೂಡ ಗರ್ಭಿಣಿ

ಆಗಿ ಹೆರಿಗೆಗೆ ಬಂದಿತ್ತ್.ಇನ್ನ್ ಒಂದೇ ಮನೇಲಿ ಎರಡ್ ಜನ ಗರ್ಭಿಣಿಗ ಇರ್ದು ಸರಿ ಅಲ್ಲ-ಂತ ಈ ರಾಜಕುಮಾರಿನ ಕೈಗೆ ಮತ್ತೆ ಕಣ್ಣಿಗೆ ಬಟ್ಟೆ ಕಟ್ಟಿ ಕಾಡಿಗೆ ಕರ್ಕ್ಂಡ್ ಹೋಗಿ ಅಲ್ಲೆ ಬುಟ್ಟ್ ಬಂದಿತ್ತ್ ಅವಳ ಅಪ್ಪ.

ರಾಜಕುಮಾರಿಗೆ ಎಲ್ಲಿಗೆ ಹೋಕು?" ಏನ್ ಮಾಡೊಕು?ತ ಗೊತ್ತಾತ್ಲೆ. ಕಾಡ್‌ಲಿ ತಿರ್ಗಿ ತಿರ್ಗಿ ಹೋಗಿ ದೊಡ್ಡ ಹುತ್ತದ ಮೇಲೆ ಬೀತ್.ಆ ಹುತ್ತಲಿ ಶೇಷಶಯನ (ನಾಗ) ವಾಸ ಆಗಿತ್ತ್.ಇವಳ ಕಷ್ಟಗಳ ಅರ್ಥ ಮಾಡಿಕಂಡ ಶೇಷಶಯನ ಇವಳ ಕಣ್ಣ್, ಕೈಗಳ್‌ಂದ ಕಟ್ಟಿದರ ಬಿಚ್ಚಿ ಬುಟ್ಟ್ ಅವಳಿಗೆ ಅಲ್ಲೆ ಆಶ್ರಯ ಕೊಟ್ಟತ್ತ್ ರಾಜಕುಮಾರಿಗೆ.ಹೆರಿಗೆ ಆಗಿ ಗಂಡ್ ಕೂಸುನ ಪಡ್ಕ್ಂಡತ್ ರಾಜಕುಮಾರ ಅವನ ರಾಣಿ ಮತ್ತೆ ಕೂಸುನ ನೋಡುವ ಆಸೆಂದ ಅವಳ ಅಪ್ಪನ ಮನೆಗೆ ಹೋಗಿತ್ತ್.ಅವಳ ಅಪ್ಪ ದೊಡ್ಡ ಮಗಳ ಒಳೆಗೆಂದ ಕರ್ಕ್ಂಡ್ ಬಾಕನ ಇದ್ ನನ್ನ ಹೆಣ್ಣ್ ಅಲ್ಲ. ಅವಳ ಕಣ್ಣ್ ಏನ್ ಹಿಂಗೆ?""ಇದ್ ನಿನ್ನ ಹೆಣ್ಣೆ ಅವಳ ಕಣ್ಣಿಗೆ ಭತ್ತ ರೆಟ್ಟಿ ಕಣ್ಣ್ ಬೇನೆ" ಂತ ಹೇಳಿತ್ ಅವಳ ಅಪ್ಪ.ರಾಜ ಒಪ್ಪಿತ್ಲೆ ಅವಳ ಒಟ್ಟಿಗೆ ರಾಜಕುಮಾರ ಕೇಳ್ತ್ "ಮನೆಲಿ ಇಸಿದ ಈಚಣಿ, ಬಾಚಣಿ ಎಲ್ಲಿಟು?"ಂತ.ಅವಳಿಗೆ ಹೇಳಿಕೆ ಗೊತ್ತಾಗದೆ ಅಲ್ಲಿ ಇಲ್ಲಿ-ಂತ ಹೇಳಿ ತಪ್ಪಿಸಿತ್."ಇದ್ ನನ್ನ ಹೆಣ್ಣ್ ಅಲ್ಲ"-ಂತ ಗೊತ್ತಾಗಿ ಅವನ ಮನೆ ಕಡೆಗೆ ಹೋದ ರಾಜಕುಮಾರ ಮಾರನೇ ದಿನ ಬಳೆಗಾರನ ವೇಶಲಿ ಊರ್‌ರು ತಿರ್ಗಿ ಕಡೆಗೆ ಕಾಡ್ ದಾರೀಲಿ ಹೋತ್. ಅವನ ರಾಣಿನ ಉಳ್ಸಿಕಂಬ ಆಸೆಲಿ ಇಡೀ ಕಾಡ್ ಕಾಡ್ ಅಲ್ತ್.ಬಳೆಗಾರ ಬಾದರ ಕಂಡ ಶೇಷಶಯನ ರಾಜಕುಮಾರಿಗೆ, ಕೂಸುಗೆ ಬಳೆ ತಕಂಬ ಹಾಂಗೆ ರಾಜಕುಮಾರಿನ ಕರ್ತ್.ಆ ಹೊತ್ತಲ್ಲಿ ರಾಜಕುಮಾರಿ "ರಾಜಕುಮಾರನ ಮಂಜ ಶೇಷಶಯನನ ಪಿಳ್ಳಿ ಬಾ ಮಂಜ"ಂತ ಮೂರು ಸರ್ತಿ ಕರ್ತ್. ಬಳೆಗಾರನ ವೇಷ ಹಾಕಂಡ್ ಬಂದ ರಾಜಕುಮಾರಂಗೆ "ಇವಳೇ ನನ್ನ ರಾಣಿ"-ಂತ ಗೊತ್ತಾಗಿ ಅವಳ ಅರಮನೆಗೆ ಕರ್ಕ್ಂಡ್ ಹೋಗಿ ಪೊರ್ಲುಲಿ ಕೂಸುನ ಹೆಣ್ಣ್‌ನ ನೋಡಿಕಂಡ್ ಇದ್ದ್ ಮಂಜಂಗೆ ಪಟ್ಟ ಕಟ್ಟಿ ಲಾಯ್ಕಲಿ ಜೀವನ ಸಾಗಿಸಿತ್ತಿದ್ದ.

* * * * * *

# ಕಷ್ಟ ಸುಖಲಿ

ಕರ್ಕುಟ್ಟಿ ಕತ್ತಲೆ. ಲಕ್ಷ್ಮಿ ಮನೆಲಿ ಮಲ್ಗಿದ ಹೊತ್ತಿಗೆ ಬೆನ್ನ್ ಬುಡದೆ ರಣ ಹದ್ದ್‌ಗಳಂಗೆ ಜೀವ ಹಿಂಡವು, ನೆಡಿರ್ಲ್‌ಗೆ ಬಂದ್ ಬಾಗ್‌ಲ್ ಬೊಟ್ಟಿ "ಲಕ್ಷ್ಮಿ" ಅಂತ ಕರ್ದ ಗಂಡ್ ಸ್ವರ ಕೇಳ್‌ತಿತ್ತ್.

ಲಕ್ಷ್ಮೀಗೆ ಎದೆ ಒಳಗೆ ನಡ್ಗಿಕೆ ಸುರು ಆತ್.ಪಾಪ ಹೆಣ್ಣ್ ಗೂಡೆ. ಸುಖದ ಜೀವನ ನಡ್ಸುವ ಹೊತ್ತಲಿ ಜೀವನಲಿ ಕತ್ತಲೆ ಆಗಿ ಹೋಗಿತ್ತ್.ಅವಳ ರೂಪ, ಲಾವಣ್ಯ, ಪೊರ್ಲು ದಿನಂದ ದಿನಕ್ಕೆ ಹೆಚ್ಚಾಗಿ ತುಂಬಿದ ಯವ್ವನ, ಅರ್ಲಿದ ಗುಲಾಬಿನಂಗೆ ಆಕಂಡ್ ಬರ್‌ತ್ತಿದ್ದ ಲಕ್ಷ್ಮಿ ದೇವರ ಹಳ್ಳಿ ಸೊಂಪನ ಮಗಳಾಗಿತ್ತ್.

ಈ ಹೆಣ್ಣ್ ಮಗಳ ಹತ್ತಿ ಇಪ್ಪತ್ತ್ ವರ್ಷಗಳ ಹಿಂದೆ ಬಾಣಂತಿ ಆಗಿರ್‌ಕನ ಲಕ್ಷ್ಮಿನ ಅಮ್ಮ ಇಹಲೋಕ ಸೇರಿಕೊಂಡಿದ್ದ.ಲಕ್ಷ್ಮಿನ ಅಮ್ಮ ತುಂಬಾ ಪೊರ್ಲು ಆಗಿದ್ದ.ಅದ್ಕೆ ಲಕ್ಷ್ಮಿ ಮತ್ತು ಅವಳ ಅಣ್ಣ ಇಬ್ಬೊರ್ ಮಕ್ಕ.ಚಿನ್ನಲಿ ಅರ್ದ್ ಮಾಡ್ದ ಗೊಂಬೆಗಳ ಹಂಗೆ ಕಾಂಬೊತ್ತಿದ್ದ.

ಅಂತ ರೂಪಕೆ ಜನ್ಮ ಕೊಟ್ಟ ಅಮ್ಮ "ನನ್ನ ಜೀವನ ಸಾರ್ಥಕ ಆತ್" ಅಂತ ಕುಸಿಲಿ ಇದ್ದ ಅವಳ ಅಮ್ಮನ ಜೀವನದ ಬೊಳ್ಪು ಕೆಟ್ಟ್  ಹೋಗಿತ್ತ್.

ಲಕ್ಷ್ಮಿನ ಅಪ್ಪ ಮತ್ತೊಂದು ಮೊದ್ವೆಗೆ ಕೈ ಹಾಕದೆ ಮಕ್ಕಳ ಪೊರ್ಲುಲಿ ಸಾಂಕಿ ಇಬ್ಬೊರಿಗು ಮೊದ್ವೆ ಮಾಡ್ದ.ಮಗಳಿಗೆ ಮೊದ್ವೆ ಆಗಿ ಮೂರು ತಿಂಗ ಆಕನ ಅವಳ ಗಂಡ ತೀರಿಹೋಗಿತ್ತ್.

ಮಗಳಿಗೆ ವಿಧವೆ ಪಟ್ಟ ಕಟ್ಟಿದ ವಿಷಯ ಗೊತ್ತಾಗಿ ಅಪ್ಪ ಕಣ್ಣ್ ಕಾಣದ ಊರಿಗೆ ಹೊರ್ಟ್ ಹೋದ.

## ಹೊಸ ಬೊದ್ಕು

"ಅಣ್ಣ ಒಬ್ಬನೆ ಕೂಲಿ ಕೆಲ್ಸ ಮಾಡಿ ಹೆಣ್ಣ್, ಮಕ್ಕಳ ಸಾಂಕಿದೆ.ಅತ್ತಿಗೆ ಕೆಲ್ಸಕೆ ಹೋದರೆ ಮನೆ ಕೆಲ್ಸಕೆ ತೊಂದರೆ ಆಗ್‌ತ್ತಿತ್ತ್.ಅದ್ಕೆ ಯಾಗಾರ್ ಒಮ್ಮೊಮ್ಮೆ ಕೂಲಿಗೆ ಹೋಗ್‌ತ್ತಿದ್ದ."ಇವರ ನಡುಲಿ ನಾ ಅಲ್ಲಿಗೆ ಹೋದರೆ ಪಾಪ ಅಣ್ಣಂಗೆ ಕಷ್ಟ ಆದೆ" ಅಂತ ಅವಳ ಗಂಡನ ನೆನ್ಪುಗಿದ್ದ ಒಂದ್ ಸಣ್ಣ ಮನೆಲಿ ಇದ್ದ್ ಅಲ್ಲೆ ಹಕ್ಕಲೆ ಕೆಲ್ಸಕ್ಕೆ ಹೋಗಿ ಅವಳ ಹೊಟ್ಟೆ ತುಂಬಿಸಿಕಣ್‌ತ್ತಿತ್ತ್.

ನೆವನಕೆ "ಮನೆಗೆ ಬಾ" ಅಂತ ಅಣ್ಣ, ಅತ್ತಿಗೆ ಕರ್ದ್‌ರೆ ಲಕ್ಷ್ಮಿ ಒಪ್ಪಿತ್ಲೆ. ಲಕ್ಷ್ಮಿ ಒಂಟಿ ಹೆಣ್ಣ್ ಅಂತ ತಿಳ್ದ್ ಊರುನ ಕೆಲವು ಪುಂಡಗ ಅವಳ ಒಟ್ಟಿಗೆ ಕೆಟ್ಟದಾಗಿ ನಡ್ಕಂಡಿದ್ದ.ಲಕ್ಷ್ಮಿ ಕೆಲ್ಸಕೆ ಹೋಗುವ ದಾರಿಲಿ ನಿತ್ತ್‌ಕಂಡ್ ಅವಳ ತುಂಬಾ ಕೀಳ್ ತನಲಿ ಕಂಡ್ ಬೇನೆ ಆಗುವ ರೀತಿಲಿ ಮಾತಾಡ್‌ತ್ತಿದ್ದ.ಅದರ ಎಲ್ಲ ತಡ್ಕ್ಂಡ್ ಜೀವನ ನಡ್ಸಿಕಂಡ್ ಇತ್ತ್.ತನ್ನ ಕಷ್ಟಗಳ ಅವಳ ಜೋಸ್ತಿ ಗಿರಿಜೆನ ಒಟ್ಟಿಗೆ ಹೇಳ್‌ತ್ತಿತ್ತ್. "ಲಕ್ಷ್ಮಿ ಹೂವು ಇರುವ ಕಡೆ ದುಂಬಿ ಹೆಂಗೆ ಬಂದದೆ, ಹಾಂಗೆ ಒಂಟಿ ಹೆಣ್ಣ್ ಇದ್ದ ಕಡೆ ಗಂಡ್‌ಗಳ ಕಾಮದೃಷ್ಠಿ ಬಿದ್ದೇ ಬಿದ್ದದೆ. ನಮ್ಮ ಹಿಡ್ತಲಿ ನಾವು ಇರೋಕು. ನೀಯಾಕೆ ಬೇರೆ ಮೊದ್ವೆ ಆಕೆ ಆಗದ್?"ಅಂತ ಗಿರಿಜೆ ಕೇಳ್ತ್.ಅದ್ಕೆ, ಇದೆಲ್ಲ ನನ್ನ ಜೀವನಲಿ ಆಗದ ಮಾತ್, ನನ್ನ ಮನ್ಸ್‌ಲಿ ಬೇರೆ ಯಾರಿಗೂ ಸ್ಥಾನ ಕೊಡಿಕಿಲೆ" ಅಂತ ನಿರ್ಧಾರ ಮಾಡಿತ್ತ್ ಲಕ್ಷ್ಮಿ.

ಲಕ್ಷ್ಮಿನ ಗಂಡ ತುಂಬಾ ಒಳ್ಳೆವ ಆಗಿತ್ತ್.ಒಂದ್ ಹೊತ್ತ್ ತಿಂಬಕೆ ಇಲ್ಲದರು ಬೇರೆವ್ಕೆ ಕೈ ನೀಂಡಿದವ ಅಲ್ಲ. ಎಂತ ಕೆಲ್ಸ ಇದ್ದರು ತುಂಬಾ ಕುಸಿಲಿ ಮಾಡ್ತಿತ್ತ್. ಹಾಂಗೆ ಲಕ್ಷ್ಮಿನ ತುಂಬಾ ಪ್ರೀತಿಂದ ಸಾಂಕ್‌ತ್ತಿತ್ತ್. ಶ್ರೀಮಂತ ಅಲ್ಲದಿದ್ದರೂ ಅವನ ಆತ್ಮಲಿ ಶ್ರೀಮಂತಿಕೆ ಇತ್ತ್.

ಬೊಳ್ಪುಂದ ಹಿಂಬೊತ್ತ್ ಮುಟ್ಟ ದುಡ್ದ್ ಊರವರ ಸಾಲ ತೀರ್ಸಿಕೆ ಮತ್ತೆ ಕತ್ತಲೆ ಒಂಭತ್ ಗಂಟೆವರೆಗೆ ದುಡೆತಿತ್ತ್.ಕೆಲ್ಸ ಮಾಡಿ ಬೊಚ್ಚಿ ಬಂದರು ಲಕ್ಷ್ಮಿನ ಮೋರೆ ನೋಡ್‌ಕನ ಅವನ ಬೊಚ್ಚೆಲ್ ಕಡ್ಮೆ ಆಗ್‌ತ್ತಿತ್ತ್.ಅವಳ ಮೇಲೆ ಅಷ್ಟೊಂದ್ ಪ್ರೀತಿ ಹುಟ್ಟ್‌ತಿತ್ತ್."ಲಕ್ಷ್ಮಿ ನನಗೆ ಇರುವ ಸಂಪತ್ ನೀನೆ. ಬೇರೆ ಏನ್ ಬೇಡ.ನೀ ಬಂದ ಮೇಲೆ ನನ್ನ ಕಷ್ಟಗ ದೂರ ಆಗ್ತಾವುಟ್, ಒಂದ್ ಸಮಯ ನಾ ಸತ್ತರು ಮುಂದೆನ ಜನ್ಮಲಿ ನಿನ್ನನ್ನೇ ಹೆಣ್ಣಾಗಿ ಕರ್ಕಂಬಕೆ ಇಷ್ಟ ಪಟ್ಟನೆ."

ಪಾಪ ಅವನ ಸಾವುನ ಸೂಚನೆ ಅಂವಂಗೆ ಗೊತ್ತಿತ್ತೊ ಏನೊ. ಒಂದ್ ದಿನ ಕೂಡ ಅವಳ ಒಟ್ಟಿಗೆ ಸಿಟ್ಟ್‌ಂದ ಮಾತಾಡ್ದವ ಅಲ್ಲ. ಕುಸಿಂದ ಮಾತಾಡ್‌ತ್ತಿತ್ತ್. ಎಲ್ಲಿಂದ ಬಾತ್ ಏನೋ ಆ ಮಹಾ ಮಾರಿ ಕಾಯಿಲೆ ಕ್ಯಾನ್ಸರ್.ಅವನ ಬೊಲಿ ತಕಂಡ್ ಹೋತ್.ಲಕ್ಷ್ಮಿನ ಜೀವನಲಿ ಬಾಳ್‌ನ ವಿಧಿ ಕ್ರೂರ ಆಗಿ ಆಟ ಆಡಿತ್ತ್.

ಗಂಡ ತೀರಿ ಹೋಗಿ ವರ್ಷ ತುಂಬುಕನ ಅದುವೆ ಊರಿಗೆ ಲಕ್ಷ್ಮಿನ ಬಾಲ್ಯದ ದೋಸ್ತಿ ಪ್ರಿಯಕರ ಆಗಿದ್ದ ಮಾಧವ ಬಂದಿತ್.ಅವ ಈಗ ಡಾಕ್ಟರ್ ಆಗಿತ್ತ್. ಸರ್ಕಾರಿ ಮನೆ ಹಕ್ಕಲೆ

ಲಕ್ಷ್ಮಿನ ಮನೆ ಇತ್ತ್.ಅವಳ ನೆನಪಿಗಾಗಿ ಮೊದ್ವೆ ಆಗದೆ ಲಕ್ಷ್ಮಿಗಾಗಿ ಕಾದಿತ್ತ್. ಒಂದ್ ದಿನ ಅಕಸ್ಮಾತ್ ಆಗಿ ಮಾಧವನ ಕಣ್ಣಿಗೆ ಲಕ್ಷ್ಮಿ ಕಂಡಿತ್.ಲಕ್ಷ್ಮಿನ ನೋಡ್ದ ಮಾದವಂಗೆ ಅಚ್ಚರಿ! ಆತ್."ಇದ್ ನನ್ನ ಲಕ್ಷ್ಮಿ ಇಲ್ಲಿಗೆ ಹೆಂಗೆ ಬಾತ್?" ಅಂತ ಪ್ರಶ್ನೆಗಳ ಹಾಕಂಡ ಅವನ ಮನ್ಸ್‌ಲಿ ಇರುವ ಗೊಂದಲ ಜಾಸ್ತಿ ಆಕನ ಲಕ್ಷ್ಮಿನೇ ಅವನ ತಿರ್‍ಗಿ ನೋಡ್ತ್." ಅರೆ! ಇಂವ ಮಾದವ ಇಲ್ಲಿಗೆ ಹೆಂಗೆ ಬಾತ್!" ಇಪ್ಪತ್ತ್ ವರ್ಷದ ಅವರಿಬ್ಬರ ಪರಿಚಯ. ಅವು ಇಬ್ರೂರ್ ಹತ್ತನೆ ಕ್ಲಾಸ್ ಮುಗ್ಸಿ ಮಾದವ ಮೈಸೂರ್‌ಗೆ ಹೋತ್.ಲಕ್ಷ್ಮಿನ ಬುಟ್ಟ್ ಹೋಕೆ ಮನ್ಸ್ ಇತ್ಲೆ.ಮಾದವ ಅವನ ಕಲಿಕೆಗಾಗಿ ಹೋತ್.ಲಕ್ಷ್ಮಿಗೆ ವಿದ್ಯೆ ಕಲಿಯಕೆ ಮತ್ತೆ ಶಕ್ತಿ ಇತ್ಲೆ.ಪ್ರೀತಿಸಿಕಂಡ್ ಇದ್ದ ಜೀವಗ ಬೇರೆ ಆಗಿದ್ದ.ಮಾದವ ಲಕ್ಷ್ಮಿನ ಪ್ರೀತಿನ ಅರ್ಥ ಮಾಡಿಕಣದ ಅವಳ ಅಣ್ಣ ಬಲವಂತಲಿ ಬೇರೆ ಮೊದ್ವೆ ಮಾಡ್ಸಿತ್ತ್.ಆದರೆ ಅದ್‌ಕೂಡ ಪ್ರಯೋಜನ ಆತ್ಲೆ.ಮಾದವನ ಮರ್‍ತ್ ಇವನ ಒಟ್ಟಿಗೆ ಸಂಸಾರ ಮಾಡಕ್‌ಂತ ಅವಳ ಅಣ್ಣ ನೆನ್ಸಿತ್.

ಮಾದವನ ನೋಡ್ದ ಹೊತ್ತಲಿ ಅವಳಿಗೆ ಕಣ್ಣ್‌ನ ನೀರ್ ತುಂಬಿ ಬಾತ್.ಅಂತ ಅವಸ್ಥೆಲಿ ಇರ್‌ಕನ ಮಾದವ ಮಾತಾಡ್ಸಿತ್.ಲಕ್ಷ್ಮಿನ ಮೇಲೆ ಇದ್ದ ನಿರ್ಮಲ ಪ್ರೀತಿ ಮಾತಾಡುವ ಹಂಗೆ ಮಾಡ್ತ್.

ಅವಳ ಜೀವನಲಿ ನಡ್ದ ದುರಂತನ ಕೇಳಿ ಬೇಜಾರ್ ಮಾಡ್ತ್ ಮಾದವ.

ಎಳೆಪ್ರಾಯದ ಗೆಳೆತನ ಅವ್ಕೆ ಹುಟ್ಟಿಕಂಡ ಪ್ರೀತಿ ಮರಿಯಕೆ ಆಗದ ನೆಂಪು ಇದೆಲ್ಲ ಇವ್ಕೆ ನೆಂಪಾತ್.ಲಕ್ಷ್ಮಿನ ಮೊದ್ವೆ ಆಗುವ ವಿಷಯ ಅವಳೆದುರಿಗೆ ಹೇಳ್ತ್.

ಅವಳಿಗೆ ಮನ್ಸ್ ಇದ್ದರು "ನಾ ಈಗ ವಿಧವೆ ಬೇರೆ ಮೊದ್ವೆ ಆಕೆ ಸಾಧ್ಯ ಇಲ್ಲೆ."ಒಂದ್ ಹೆಣ್ಣ್ ಒಮ್ಮೆ ಮೊದುವೆ ಆಗಿ ಗಂಡ ಸತ್ತರೆ ಇನ್ನೊಂದ್ ಗಂಡ್‌ನ ಇಷ್ಟ ಪಡ್ದು ತುಂಬಾ ಕಡ್ಮೆ.ಕೆಲವೊಮ್ಮೆ ಉಪಾಯ ಇಲ್ಲದೆ ಒಪ್ಪಿಕಣ್‌ವಂತ ಸಂದರ್ಭ ಬಂದದೆ.ಅಂತ ಸಂದರ್ಭ ಇಂದ್ ಲಕ್ಷ್ಮಿಗೆ ಒದ್ಗಿ ಬಾತ್.ಲಕ್ಷ್ಮಿನ ಅಂದ್‌ನ ಜೀವನಲಿ ಕೃಷ್ಣ ಮತ್ತೆ ಮಾಧವ ಬಂದಿದ್ದ.ಮಾಧವ ಅವಳ ಜೀವನದಿಂದ ದೂರಾದ ಮೇಲೆ ಅವಳ ಗಂಡನ ಪ್ರೀತಿನ ಬಲೆಲಿ ಸುತ್ತಿಕಂಡಿತ್ತ್. ಬೇರೆ ಗಂಡ್‌ಗಳ ಬಗ್ಗೆ ಯೋಚನೆ ಮಾಡದಷ್ಟು ಪ್ರೀತಿ ಕೊಡ್ತಿದ್ದ ಅವಳ ಗಂಡನ ಕಳ್ಕಂಡಿತ್ತ್, ಒಂಟಿ ಜೀವಕೆ ಜಂಟಿ ಆಕೆ ಹಳೇ ಜೀವ ಅವಳ ಪ್ರೀತಿಗಾಗಿ ಆಸೆ ಪಡ್‌ಕನ ಲಕ್ಷ್ಮಿನ ಹೆಸ್ರ್‌ಗೆ ಮೊಸಿ ಉಜ್ಜುವ ಕೆಲ್ಸಗ ನಡೆತಿತ್ತ್.

ಮಾದವಂಗು ಲಕ್ಷ್ಮಿಗೂ ಸಂಬಂಧ ಉಟ್ಟು ಅಂತ ಗಾಳಿ ಸುದ್ದಿ ಆಗಿತ್ತ್.ಏನ್ ಮಾಡೊಕು ಅಂತ ಯೋಚ್ನೆ ಮಾಡ್ದ ಲಕ್ಷ್ಮಿ ಕಂಗಾಲಾಗಿ ಹೋತ್.ಎಲ್ಲಿ ಹೋದರೂ ಕೆಟ್ಟ ಮಾತ್‌ಗಳೇ ಅವಳ ಕಿಬಿಗೆ ಕೇಳ್ಸಿತ್. ಬೇಜಾರ್ ಆದ ಲಕ್ಷ್ಮಿ ಸಾಯಕೆ ಪ್ರಯತ್ನ ಪಟ್ಟತ್.

ಒಂದ್ ದಿನ ಅವಳೇ ನೇಣ್ ಹಾಕಂಬ ಪ್ರಯತ್ನ ಮಾಡ್ತ್.ಮಾದವನ ಮನೆ ಕೆಲ್ಸದ ಮಲ್ಲಿಗೆ ಈ ಕಥೆನ ನೋಡಿ ಜೋರ್ ಬೊಬ್ಬೆ ಹಾಕಿತ್. ಗಡಿ ಬಿಡಿಲಿ ಓಡಿ ಬಂದ ಮಾದವ ಅವಳ ಮನೆಗೆ ಹೋಗಿ ಸಾಯುವ ಸ್ಥಿತಿಂದ ಅವಳ ದೂರ ಮಾಡ್ತ್. "ನೀ ನನ್ನ ಮೊದ್ವೆ

ಆಗದೆ ಇದ್ದರೂ ತೊಂದರೆ ಇಲ್ಲೆ.ಇಂತ ಕೆಲ್ಸ ಮಾಡ್ದು ಬೇಡ" ಸಿಟ್ಟ್‌ಂದ ಹೊರ್ಟ್ ಹೋತ್. ಮಲ್ಲಿ ಲಕ್ಷ್ಮಿಗೆ ಒಂದ್ ಮಾತ್ ಹೇಳ್ತ್ :

"ನಾ ಗಿರಿಜೆನ ಅಮ್ಮ ಆಗಿರುವೆ ಅದ್ಕಾಗಿ ಒಂದ್ ಮಾತ್ ಹೇಳ್ನೆ ಮಾದವ ಡಾಕ್ಟರ್ ಅವನಂತ ಧನಿ ಎಲಿ ಸಿಕ್ಕುವೆ? ಅವರನ್ನೇ ಮೊದ್ವೆ ಆದರೆ ನೀ ಸುಖಲ್ಲಿ ಇದ್ದಿಯ. ಅಲ್ಲದೇ ನಿನ್ನ ಮೇಲೆ ಆದ ಅಪವಾದ ದೂರ ಅದೆ.ಆಲೋಚನೆ ಮಾಡ್ ಮಗಳೆ" ಹೊಗಳಿಕೆ ಸುರು ಮಾಡ್ತ್.

ಮಲ್ಲಿ ಹೋದ ಮೇಲೆ ಯೋಚ್ನೆ ಮಾಡ್ದೆ.ಒಂದ್ ವಾರ ಕಳ್ದ್ ಲಕ್ಷ್ಮಿ ಗಿರಿಜೆ ಇಬ್ಬರು ಒಟ್ಟಿಗೆ ಕೆಲ್ಸಕೆ ಹೋಗ್ತಿದ್ದ. ಆದರೆ ಲಕ್ಷ್ಮಿನ ಮನ್ಸ್‌ಲಿ ಅಷ್ಟೊಂದು ಕುಸಿ ಕಾಂಬೊತಿಲ್ಲೆ.ಅವಳಿಗೆ ಈ ಜೀವಮಾನವೇ ಬೇಡಾಂತಾಗಿ ಏನೇನೋ ಆಲೋಚನೆ ಬೆಳೆತ್ತಿತ್ತ್.

ಅಂದ್ ಅವಳ ಮೈಗೆ ಹುಷಾರ್ ಇಲ್ಲದೆ ಸೊಯ ತಪ್ಪಿದ ಹಾಂಗೆ ಆಗಿ ಬಿದ್ದ್ ಹೋಗಿತ್. "ಯಾಕೆ! ಲಕ್ಷ್ಮಿ ಬಾತ್ಲೆ" ಗಿರಿಜೆ ಅವಳ ಮನೆಗೆ ಹೋಗಿ ನೋಡ್ತ್ ಜ್ಞಾನ ಇಲ್ಲದವಳ ಹಾಂಗೆ ಬಿದ್ದ ಲಕ್ಷ್ಮಿನ ನೋಡಿ ಬೊಬ್ಬೆ ಹಾಕಿತ್ ಗಿರಿಜೆ.

ಮಗಳ ಬೊಬ್ಬೆಗೆ ಹೆದ್ರಿದ ಮಲ್ಲಿ ಮಾದವನ ಕರ್ತ್.ಮಾದವ ಡಾಕ್ಟರ್ ಆದ ಕಾರಣ ಅವನ ಮನೆಗೆ ಲಕ್ಷ್ಮಿನ ಕರ್ಕ್ಂಡ್ ಹೋಗಿ ಅವನೇ ಮದ್ದ್ ಮಾಡ್ತ್.ಅವಳ ಜ್ವರ ಜ್ಞಾನ ತಪ್ಪುವ ಹಂಗೆ ಮಾಡಿತ್ತ್.

ಲಕ್ಷ್ಮಿ ಕಣ್ಣ್ ಬುಡುವ ಹೊತ್ತಲಿ ಯಾದೋ ದೊಡ್ಡ ಬಂಗ್ಲೆಲಿ ಇದ್ದ ಅನುಭವ. ಒಮ್ಮೆಗೆ ಎದ್ದ್ ಕುದ್ದಿತ್.ಸೀರೆ ಸೆರ್ಗ್ ಜಾರಿತ್ ನಾಚಿಕೆಲಿ ತಲೆ ತಗ್ಗಿಸಿತ್.ತಲೆ ಎತ್ತಿ ನೋಡ್‌ಕನ ಮಾದವ ಟಿ.ವಿ ಮುಂದೆ ಕುದ್ದಿತ್ತ್. ನಾಚಿಕೆ ಮಾಡ್ದ ಲಕ್ಷ್ಮಿ ಅವಳ ಮನೆ ಕಡೆ ಓಡಿಕೆ ನೋಡ್ತ್.

"ನಿಲ್ಲ್ ಲಕ್ಷ್ಮಿ ಏನಾತ್ ನಿಂಗೆ?" ನಡ್ದ ಕಥೆಗಳ ಮಾದವ ವಿವರಿಸಿ ಹೇಳ್ತ್. "ಮಾದವನ ಮೇಲೆ ನಾ ಅನುಮಾನ ತಿಳ್ಕಂಡಿದ್ದೆ.ಈಗ ಅವರ್‌ಂದಲೇ ಹುಷಾರ್ ಆದೆ ಇನ್ನ್ ಮನೆಗೆ ಹೋಗಿ ಅಲ್ಲಿ ಇದ್ದನೆ" ಮಲ್ಲಿ ಒಟ್ಟಿಗೆ ಹೇಳ್ತ್.ಬೊಳ್ಪುನ ತಿಂಡಿ ತಿಂದ್ ಮನೆ ಕಡೆ ಹೊರ್ಟಿತ್ ಲಕ್ಷ್ಮಿ."ಲಕ್ಷ್ಮಿ ಇಂದ್ ಕೆಲ್ಸಕೆ ಹೋದು ಬೇಡ.ಸರಿ ಆದ ಮೇಲೆ ಹೋಗ್.""ಇಲ್ಲೆ ನಂಗೇನೂ ಆತ್ಲೆ ನಾ ಕೆಲ್ಸಕೆ ಹೋನೆ." "ಧನಿಗ ಹೇಳ್ದ ಮಾತ್ ಕೇಳ್ ಲಕ್ಷ್ಮಿ. ಇಂದ್ ನೀವ್ ಇಬ್ಬೊರು ಕೆಲ್ಸಕೆ ಹೋದು ಬೇಡ ಗಿರಿಜೆ ನೀ ಅವಳ ಮನೆಗೆ ಹೋಗು."ಮಗಳ ಲಕ್ಷ್ಮಿನ ಮನೆಗೆ ಕಳ್ಸಿಕೊಟ್ಟತ್.ಎಲ್ಲಿ ನಾ ಮಾದವನ ಪ್ರೀತಿಗೆ ಬಿದ್ದ್ ಬುಟ್ಟನೆ ಅಂತ ಹೆದ್ರಿಕೆ.ಮಾದವಂಗೆ ಅವಳ ಮನ್ಸ್‌ಲಿ ಜಾಗ ಕೊಟ್ಟಿತ್. ಹೇಳಿಕೆ ಆಗದೆ ಮನ್ಸ್‌ನ ಭಾವನೆ ಅವನ ಕಡೆಗೆ ಬಾಗಿ ಮೌನವೇ ಉತ್ತರ ಆಗಿತ್ತ್. "ಇನ್ನ್ ನನ್ನ ಬುಡ್ದುಲೆ ನಾ ಅವನ ಪ್ರೀತಿ ಮಾಡ್ನೆ ಅಂತ ಗೊತ್ತಾದರೆ ಮೊದ್ವೆ ಆದೆ." ಊರ್ ಬುಟ್ಟ್ ಹೋಕೆ ಅಂದಾಜ್ ಮಾಡ್ತ್ ಲಕ್ಷ್ಮಿ.

## ಹೊಸ ಬೊದ್ಕು

ಮಾರನೆ ದಿನ ಬೊಳ್ಪುನ ಹೊತ್ತಲಿ ಅವಳಿರುವ ಮನೆ, ಜೋಸ್ತಿ ಗಿರಿಜೆ, ಮಾದವ ಮಲ್ಲಿ ಇವರೆಲ್ಲ ಬುಟ್ಟ್ ಬೇರೆ ಊರಿಗೆ ಹೊರ್ಟ್ ಹೋಕನ ಮಾದವನ ಮನೆ ಮುಂದೆ ಒಂದ್ ಕಾಗದ ಬರ್ದ್ ಇಸಿತ್.

"ನಂಗೆ ನಿನ್ನಿ ಮೇಲೆ ನಿಜವಾಗಿ ಪ್ರೀತಿ ಉಟ್ಟು. ಆದರೆ ನಾ ವಿಧವೆ ಅಂತ ನಿಂಗೆ ಗೊತ್ತುಟು.ನಿ ನನ್ನ ಮೊದ್ವೆ ಆದರೆ ಇಡೀ ಊರವೇ ನನ್ನ ಬಗ್ಗೆ ತಪ್ಪಾಗಿ ತಿಳ್ಕಂಡವೆ. ಅದ್ಕೆ ಈ ನಿರ್ಧಾರ ಮಾಡ್ದೆ.ಇನ್ನೊಂದ್ ಜನ್ಮ ಇದ್ದರೆ ನಿನ್ನ ಪ್ರೀತಿನ ಹಂಗೆ ಇಸಿಕಂಡ್ ಮೊದ್ವೆ ಆಗಿದ್ದನೆ." ಕಾಗದ ಒಡ್ದ್ ನೋಡ್ದ ಮಾದವ ಲಕ್ಷ್ಮಿಗಾಗಿ ಹುಡ್ಕದ ಊರೇ ಇತ್ಲೆ. ಅವಳ ನೆಂಪುಲಿ ಮಾದವನ ಮನ್ಸ್ ಕೊರೆತಿತ್ತ್. ಲಕ್ಷ್ಮಿ ಹೋಗಿ ಒಂದ್ ವಾರಲಿ ಅಪರಿಚಿತ ಮಹಿಳೆಯ ಸಾವು. ಪೇಪರ್ ಓದಿದ ಮಾದವನ ಎದೆಗೆ ಕಲ್ಲ್ ಹೊತ್ತ್ ಹಾಕಿದ ಅನುಭವ ಆತ್.ಅವನ ಬೇನೆನ ತಡಿಯಕೆ ಆಗದೇ ಅದೇ ಜಾಗಕೆ ಬಾತ್ ಮಾದವ. ಲಕ್ಷ್ಮಿ ಕೂಡ ಆ ಪೇಪರ್‌ನ ಓದಿ ನೋಡಿತ್. "ಮಾದವ ಅಲ್ಲಿಗೆ ಬಂದೇ ಬಂದದೆತ ಅವಳ ಮನಸ್ಸ್ ಹೇಳ್ತ್. ಅವನ ಕಣ್ಣ್ ತುಂಬಾ ನೋಡೊ ಆಸೆಲಿ ಮತ್ತೆ ಊರಿಗೆ ಬಾತ್ ಲಕ್ಷ್ಮಿ. ಅಕಸ್ಮಾತಾಗಿ ಮಾದವ ಅವಳ ನೋಡಿ "ಲಕ್ಷ್ಮಿ ಅಂತ ಕರ್ತ್. ಅವನ ಕೂಗು ಅವಳಿಗೆ ಕೇಳಿರೂ ಕೇಳದವರ ಹಂಗೆ ಹೊರ್ಟ್ ಹೋಕೆ ನೋಡ್ತ್.

ಅವನ ಪ್ರೀತಿ  ಮಾತ್ರ ಅಲ್ಲಿಂದ ಹೋಗದ ಹಂಗೆ ಮಾಡ್ತ್. ಅವನ ಬುಟ್ಟ್ ಬೊದ್ಕಿಕೆ ಆಗದಷ್ಟು ಪ್ರೀತಿ ಇದ್ದರೂ ಹೇಳಿಕೆ ಆಗದೇ ಒದ್ದಾಡಿ ಊರೇ ಬುಟ್ಟ್ ಹೋಗಿತ್ತ್. ಈಗ ಅವನ ಕಾಂಬಕನ ಅವಳ ಮನ್ಸ್ ಅವನ ಪ್ರೀತಿನ ಕೈಲಿ ಹಿಡ್ದ್ ಏನೂ ಗೊತ್ತಾಗದ ಸ್ಥಿತಿಲಿ ಮಾದವನ ತೊಬ್ಬಿ ಮೊರ್ಟ್ತ್. ಮಾದವ ಅವಳ ತಬ್ಬಿ ಹಿಡ್ದ್ ಸಮಾದಾನಕೆ ತಂದ್ ಮೊದ್ವೆ ಆತ್.

ಹಿಂದೆ ನಡ್ದ ಕಥೆಗಳ ಎಲ್ಲ ಮರ್ತ್ ಹೊಸ ಬೊದ್ಕು ಕಟ್ಟಿಕಂಡ್ ಒಂದ್ ಕೂಸುನ ಅಮ್ಮ ಆತ್ ಲಕ್ಷ್ಮಿ.ಅವರ ಪ್ರೀತಿ ಕಡೆಗೂ ಬುಟ್ಟ್ ಹೋಗದೇ ಹಳ್ಳ ಸಮುದ್ರನ ಸೇರ್ದ್ ಹಂಗೆ ಇವು ಸೇರಿಕಂಡ್ ಮಿಡ್ದ ಜೀವಗ ಒಂದಾದ. ಅವರ ಪ್ರೀತಿ ನಿತ್ತ ನೀರಾಗದೆ ಮೈ ತುಂಬಿ ಹರಿಯಕೆ ಸುರು ಆತ್.ಪ್ರೀತಿ ಯಾಗೋಳಿಗು ಸಾಯುದ್ಲೆ.ಪ್ರೀತಿಲಿ ಬೊದ್ಕಿ ಅದರ ಅನುಭವ ಪಡ್ದವವನೆ ನಿಜವಾದ ಮೊನ್ಸ್‌ರ್. ಇದ್ಕೆ ಲಕ್ಷ್ಮಿ , ಮಾದವ ಉದಾಹರಣೆ ಆದ.

* * * * * *

# ಕಾಲ ಬದಲಾದೆ

ಹಿಂದೆ ಹಿರಿಯವು ಹೇಳ್ತಿದ್ದ ಮಾತಿತ್ತ್.ಅಪ್ಪ ಸತ್ತರೆ ಮಕ್ಕ ತಬ್ಬುಲಿ ಆದ್ಲೆ, ಅಮ್ಮ ಸತ್ತರೆ ಮಕ್ಕ ತಬ್ಬುಲಿ ಆದವೆಂತ.ಹಿರಿಯರ ಮಾತುಲಿ ಯಾಗೋಳು ಸತ್ಯ ಇದ್ದೆ ಇದ್ದದೆ.ಹಿಂಗಿರಿಕನ ಹಿರಿಯವ್ಕೆ ಗೌರವ ಕೊಡ್ದು ನಮ್ಮ ಕೆಲ್ಸ ಆಗಿರೋಕು.ನಮ್ಮ ಪಕ್ಕದ ಊರ್‌ಲಿ ಅಪ್ಪ ಅಮ್ಮಂಗೆ ಒಬ್ಬನೇ ಮಂಜ.ಅದೆಂತೊ ಕಾಯಿಲೆ ಬಂದ್ ಅಪ್ಪ ತೀರಿ ಹೋದ. ಅವನ ಅಮ್ಮ ಮಂಜನ ಯಾವ ವಿಷಯಲಿ ಬುಟ್ಟ್ ಹಾಕದೆ, ಹಕ್ಕಿ ಪಿಳ್ಳೆನ, ರೆಂಕೆ ಅಡಿಲಿ ಇಸಿ ಸಾಕಿದಂಗೆ ಸಾಕಿತ್. ನನ್ನ ಮಂಜ ಓದೋಕು–ಂತ ಕಷ್ಟ ಬಂದ್ ಶಾಲೆಗೆ ಸೇರ್ಸಿರೆ, ಅವನೇ ಸರಿಯಾಗಿ ಶಾಲೆಗೆ ಹೋಗದೆ ಏಳನೇ ಕ್ಲಾಸ್‌ಲಿ ಶಾಲೆ ಬುಟ್ಟತ್ತ್. ಸರಿಯಾದ ಕೆಲ್ಸನೂ ಇಲ್ಲದೇ ಅಮ್ಮ ದುಡ್ಡ ದುಡ್ಡ್‌ನ ಕೇಳಿಕಂಡ್ ಕುಡ್ದ್ ಹಾಳ್ ಮಾಡ್ತಿತ್ತ್.

ಮಂಜನ ಅಷ್ಟ್ ಲಾಯ್ಕ ಸಾಂಕಿರು ಮಂಜ ಅಮ್ಮನ ನೆಮ್ಮದಿನ ಹಾಳ್ ಮಾಡ್ತಿತ್ತ್."ಇವಂಗೆ ಮದ್ವೆ ಮಾಡ್ಸಿರೆ!ಮೂಕುಗೆ ಮೂಗುದಾರ ಹಾಕಿದಂಗೆ ಆದೆ ಮತ್ತೆ ಕೆಲ್ಸ ಮಾಡಿ ನಮ್ಮ ಸಾಂಕುದು" ಮಂಜಂಗೆ ಮೊದ್ವೆ ಮಾಡುವ ಆಲೋಚನೆ ಮಾಡ್ತ.ಪಾಪದ ಗೂಡೆನ ಹುಡ್ಕಿ ಮಂಜಂಗೆ ಮೊದ್ವೆ ಮಾಡ್ಸಿದ.ಅತ್ತೆನ ಆಸೆನ ಹಂಗೆ ಸೊಸೆ ಕೂಡ ಹೊಂದಿಕಂಡ್ ಇರ್ತಿತ್ತ್. ಗಂಡನ ಕುಡಿತದ ಅವತಾರ, ಬೇಜವಾಬ್ದಾರಿನ ಕಂಡ್ ರೋಸಿ ಹೋತ್. ಕಲ್ಲ್ ಬಂಡೆಗೆ ನೀರ್ ಹೊಯ್ದ್‌ರೆ ಏನ್ ಉಪಯೋಗ ಆದೆ? ಕುಡ್ದ್ ಜಗಳ ಮಾಡಿಕಂಡ್ ಹೆಣ್ಣ್‌ಗೆ ಅಮ್ಮಂಗೆ ಹೊಡಿಯಕೆ ಸುರು ಮಾಡ್ತ್. ಒಂದು ವರ್ಷ ಆಕನ ಇವಂಗೆ ಹೆಣ್ಣ್ ಕೂಸು

## ಹೊಸ ಬೊದ್ಕು

ಹುಟ್ಟಿತ್ ಆ ಕೂಸುಗೆ ಅಜ್ಜಿನೆ ಶಾಂತಿ–ಂತ ಹೆಸ್‌ರ್ ಇಸಿದ. ಕೂಸು ಹುಟ್ಟಿದ ಮೇಲೆ ಇವನ ಕಾಟ ಜಾಸ್ತಿ ಆಗಿ ಬೊದ್ಕೆ ಬೇಡಾಂತ ಅನ್ಸ್‌ವಷ್ಟ್ ಹೊಡ್ಡ್ದ ಹೆಣ್ಣಿಗೆ ಹಿಂಸೆ ಕೊಡ್‌ತಿತ್ತ್. ಇವನ ಹೆಣ್ಣ್ ಕೂಸುನ ಮೋರೆ ನೋಡಿಕಂಡ್ ಬೊದ್ಕುತ್ತಿತ್. ಅವನ ಅಮ್ಮ ಹಳೇ ಕಾಲದ ಅಜ್ಜಿಯಾದರೂ ಗಟ್ಟಿ ಮುಟ್ಟಾಗಿದ್ದ. ಒಂದ್ ಕೆಟ್ಟ ಗಳ್ಗೆಲಿ ಹೆಣ್ಣ್‌ಗೆ ಸಂಸಾರ ಬೇಡಾಂತಾಗಿ ವಿಷ ಕುಡ್ದೇ ಬುಟ್ಟತ್.ಕೂಸುಗೆ ಆಗ ಐದ್ ವರ್ಷ ಆಗಿತ್ತ್.ಕೂಸು ಮತ್ತೆ ಅಜ್ಜಿನ ಬೊಬ್ಬೆನ ಕೇಳಿಕೆ ಆತಿತ್ಲೆ.ಗಂಡ ಮಾತ್ರ ಏನ್ ಗೊತ್ತಿಲ್ಲದವರ ಹಂಗೆ ಕುದ್ದಿತ್ತ್.ಮುಳ್ಳಿನ ನೋಡಿಕಂಬ ಕೆಲ್ಸ ಅಜ್ಜಿನ ಪಾಲಾತ್.ಶಾಂತಿ ಬೆಳ್ದ್ ದೊಡ್ಡದಾದಂಗೆ ಬೇರೆ ಮಕ್ಕಳ ಅಮ್ಮಂದಿರ ನೋಡಿ "ಅಜ್ಜಿ–ಅಜ್ಜಿ ಎಲ್ಲವುಕೆ ಅಮ್ಮ ಒಳ! ನನ್ನ ಅಮ್ಮ ಎಲ್ಲಿ?ನನ್ನ ಅಮ್ಮನ ನಾ ಯಾಗ ನೋಡ್ದು ಅವ್ವ?""ಮಂಜ ಸತ್ತವು ತಿರ್‍ಗಿ ಬಾದ್ಲೆ.ಆಕಾಶಲಿ ನಕ್ಷತ್ರ ಆಗಿ ನಿನ್ನ ನೋಡ್ತಾ ಉಟ್ಟು ಮಂಜ" ಸಮಾದಾನ ಹೇಳ್ದ ಅಜ್ಜಿ. "ಇನ್ನ್ ಅಮ್ಮಂಗೆ ಕೆಲ್ಸ ಮಾಡಿಕೆ ಆದ್ಲೆ–ಂತ ಮಂಜ ಮತ್ತೊಂದು ಮೊದ್ವೆಗೆ ಕೈ ಹಾಕಿತ್. ಮೊದ್ವೆ ಆಗಿ ಬಂದ ಹೆಣ್ಣ್ ಶಾಂತಿಗೆ ಮಲತಾಯಿ (ಚಿಕ್ಕಮ್ಮ) ಆತ್.

ಮನೆ ಕೆಲ್ಸಗಳ ಶಾಂತಿನ ಒಟ್ಟಿಗೆ ಮಾಡ್ಸಿತ್ತಿತ್ತ್. ಚಿಕ್ಕಮ್ಮ ತಿಂಬಕೆ ಸರಿಯಾದ ಗಂಜಿ ಕೊಡದೆ ಹಾಕಿಕೆ ಸರಿಯಾದ ಬಟ್ಟೆಗಳ ಕೊಡದೆ ಬರೇ ಕೆಲ್ಸಗಳ ಮಾತ್ರ ಮಾಡುವ ಹಂಗೆ ಶಾಂತಿಗೆ ಆತ್. ಇದರೆಲ್ಲ ನೋಡಿ ಬೇಜಾರ್ ಆದ ಅಜ್ಜಿ ಒಂದ್ ದಿನ ಕಣ್ಮುಚ್ಚಿದ.

ಗಂಡನ ದುಡ್ಸಿ ಹೆಣ್ಣ್ ಹೇಳ್ದಾಂಗೆ ಕೇಳುವ ಹಂಗೆ ಆತ್.ಈಗ ಮಾತ್ರ ಶಾಂತಿನ ಮೇಲೆ ತುಂಬಾ ಹೊಟ್ಟೆ ಉರಿಯಕೆ ಸುರು ಆತ್ ಅವಳ ಅಪ್ಪಂಗೆ.ಕಾಲ ಮಿಂಚಿ ಹೋತ್ ಎಂತ ಮಾಡಿಕೆ ಆದೆ ಶಾಂತಿಗೆ ಸೆರೆಮನೆ ಆಗಿತ್ತ್. ವರ್ಷ ಕಳ್ದಾಂಗೆ ಚಿಕ್ಕಮ್ಮಂಗೆ ಎರಡು ಹೆಣ್ಣ್ ಮಕ್ಕ ಆಗಿ ಶಾಂತಿಗೆ ತಂಗೆಕ ಆದ. ಆ ಮಕ್ಕಳ ಚಾಕರಿ ಎಲ್ಲ ಶಾಂತಿನ ತಲೆ ಮೇಲೆ ಬೀತ್. ಗಂಡ ದುಡ್ದ ದುಡ್ಡ್‌ನ ಹೆಣ್ಣ್ ತಕಂಡ್ ತಂಗೆಗಳ ಶಾಲೆಗೆ ಕಳ್ಸ್‌ಕನ ಶಾಂತಿ ಆಸೆ ಕಣ್ಣ್‌ಂದ ನೋಡ್ತಿತ್ತ್. ಮಕ್ಕಳಿಗೆ ಬೇಕಾದ ಬಟ್ಟೆ ಬೊರಿಗಳ ತೆಗೆಕನ ಶಾಂತಿಗೆ ಅವಳ ಅಮ್ಮ, ಮತ್ತೆ ಅಜ್ಜಿನ ನೆನ್ಪ್‌ಗಾತ್ತಿತ್ತ್. ಕಷ್ಟಲಿ ಕಾಲ ಕಳೆವ ಶಾಂತಿ ನೋಡಿಕೆ ತುಂಬ ಪೊರ್ಲು ಆಗಿ ಗುಣ ನಡ್ತೆ ಲಾಯ್ಕಗಿ ಇತ್ತ್.

ತಂಗೆಕ ಅರೆ ಬರೆ ವಿದ್ಯೆ ಕಲ್ತ್‌ಕಂಡ್ ದುರಹಾಂಕರಿಗ ಆಗಿದ್ದ. ಶಾಂತಿಗೆ ಚಿಕ್ಕಮ್ಮ ಕೊಡುವ ಕಷ್ಟ ಅಷ್ಟಿಷ್ಟಲ್ಲ. ಆದರೂ ಶಾಂತಿನ ಮನ್ಸ್ ಶಾಂತವಾಗಿಯೇ ಇತ್ತ್.ಊರುಲಿ, ನೆಂಟರಿಷ್ಟರಲ್ಲಿ ಯಾವ ಜಂಭರ ಇದ್ದರೂ ಶಾಂತಿಗೆ ಹೋಗುವ ಅಧಿಕಾರ ಇತ್ಲೆ.ಅಪ್ಪ ಶಾಂತಿನ ಪರ ಇದ್ದರು ಅಮ್ಮ ಮತ್ತೆ ಮಕ್ಕಳ ಬಾಯಿ ಎದುರು ಏನೂ ಮಾಡಿಕೆ ಆಗ್‌ತಿತ್ತ್‌ಲೆ. ಒಂದು ದಿನ ಶಾಂತಿನ ಮನೆ ಹಕ್ಕಲೆನ ಗೂಡೆ ಒಟ್ಟಿಗೆ ಆಟ ಆಡಿಕಂಡ್ ಇದ್ದ ಜೋಸ್ತಿನ ಮೊದ್ವೆ ಇತ್ತ್.ಅಪ್ಪನ ಒಟ್ಟಿಗೆ ಕೇಳಿರೆ ಒಪ್ಪುವ–ಂತ "ಅಪ್ಪ ನಾ ಬರಕ ಮೊದ್ವೆಗೆ"–ಂತ ಕೇಳ್ತ್. "ಛೀ ನೀ ಮೊದ್ವೆಗೆ ಬಾದು ಬೇಡ. ಮನೆಲಿ ಮೊಸಿ ಉಜ್ಜಿಕಂಡ್ ಇರ್, ನಿನ್ನ



52

ಹರ್ಕ್‌ಲ್ ಬಟ್ಟೆ ಹಾಕಂಡ್ ಬಂದರೆ ನಮ್ಮ ಮರ್ಯಾದೆ ಹೋದು.ಯಾರ್ ಕೂಡ ನಿನ್ನ ತಲೆ ಎತ್ತಿ ನೋಡಕಿಲೆ." ಶಾಂತಿಗೆ ಹಂಗಿಸಿದ.ಶಾಂತಿ ಪೊರ್ಲ್ಲನ ಗೂಡೆ ಆಗಿ, ನಾಲ್ಕ್ ಜನ ಸೇರ್ದಲ್ಲಿ ಅವಳ ನೋಡುವ ಹಂಗೆ ಇತ್ತ್."ಇವಳ ಮೊದ್ವೆ ಆಕೆ ಕೇಳಿರೆ ಮನೇಲಿ ಕೆಲ್ಸ ಮಾಡಿಕೆ ಜನ ಇಲ್ಲೇಂತ ಒಪ್ಪದೆ, ಅವ್ಕೆ ಬೇಕಾದ ಹಂಗೆ ಸಿಂಗರಿಸಿಕೊಂಡು ಮೊದ್ವೆಗೆ ಹೊರ್ಟ್ ಹೋದ.ತಂಗೆಕ ಎಷ್ಟ್ ಸಿಂಗರಿಸಿ ಕಂಡರು ಶಾಂತಿನಷ್ಟು ಪೊರ್ಲ್ಲ ಇತ್ಲೆ. ಎಲ್ಲವು ಇವಳ್ನ ಹಂಗಿಸಿ ಮೊದ್ವೆಗೆ ಹೋದ ಮೇಲೆ ಕಳ್ಕಂಡ ಅಮ್ಮನ, ಅಜ್ಜಿನ, ನೆನ್ಸಿ ದುಕ್ಕುಡ್ಸಿ ಮರ್ಟ್ ಹಂಗೆ ಗೋಡೆಗೆ ಒರ್ಗಿ ಕುದ್ದ ಶಾಂತಿಗೆ ಕಣ್ಣ್‌ಗೆ ಅಡ್ಡ ಬಂದ್ ನಿದ್ದೆ ಹೋತ್."ನನ್ನ ಕಬ್ಬಿಣದ ಪೆಡಿಗೆಲಿ ನಿಂಗೆ ಸಿಂಗರಿಸಿಕೆ ಬೇಕಾದ ಸೀರೆಗ ಉಟ್ಟು.ಅದರ ಉಟ್ಟುಕಂಡ್ ಒಂದ್ ಗಳಿಗೆ ಮೊದ್ವೆಗೆ ಹೋಗ್.ಮಗಳೇ ನಾ ಸತ್ತರೂ ನಿನ್ನ ಬೆನ್ನ್‌ನ ಹಿಂದೆ ಒಳೆ"–ಂತ ಒಮ್ಮೆ ಶಾಂತಿನ ಮೋರೆ ಪೂಜಿ ಹೇಳ್ದಂಗೆ ಆತ್.ಶಾಂತಿಗೆ ಅಚ್ಚರಿ ಆತ್. ಕಣ್ಣ್ ಬುಟ್ಟ್ ನೋಡ್‌ಕನ ಅಲ್ಲಿ ಯಾರೂ ಇತ್ಲೆ. ಕನ್ಸ್‌ಲಿ ಬಂದ್ ಹೇಳ್ದ ನನ್ನ ಅಮ್ಮನ ಮಾತ್‌ಲಿ ಏನಾದ್ರ್ ಅರ್ಥ ಇರ್ದುಂತ ಪೆಟ್ಟಿಗೆಲಿ ಇದ್ದ ಸೀರೆನ ಉಟ್ಟು ಸಿಂಗರಿಸಿಕಂಡ್ ಮೊದ್ವೆಗೆ ಶಾಂತಿ ಹೋಗಿತ್ತ್.

ಮೊದ್ವೆಗೆ ಹೋದ ಶಾಂತಿನ ಮೇಲೆ ಸಿಟ್ಟ್ ಬಂದ ಚಿಕ್ಕಮ್ಮ, ತಂಗೆಕಳ ಮೋರೆ ಕಾದ ಕೆಂಡದಾಂಗೆ ಆತ್.ಇವರ ಬೊಯ್ಗಿಳ ತಡ್‌ಕಂಡ ಶಾಂತಿಗೆ "ಒಂದ್ ಗಳ್ಗೆ ಮೊದ್ವೆಗೆ ಹೋದೆ"–ಂತ ಕುಸಿಲಿ ಇತ್ತ್. ದಿನ ಕಳ್ದ್‌ಂಗೆ ಚಿಕ್ಕಮ್ಮ ಅವರ ಹೆಣ್ಮಿಕ್ಕಳ್ಳ ಮೊದ್ವೆಗೆ ನೆಂಟಸ್ಥಿಕೆ ನಡ್ಸಿದ.ಶ್ರೀಮಂತ ನೆಂಟ್ರ್ ಆಗಿದ್ದ್ ಧನ ಪಿಸಾಚಿಗ ಆಗಿದ್ದ ಇವರ ಶ್ರೀಮಂತಿಕೆನ ನೋಡಿ ಅವರ ಮನ್ಸ್‌ಲಿ ಅರ್ಥ ಮಾಡಿಕಣದೆ, ಹೃದಯದ ಒಳಗೆ ಶ್ರೀಮಂತಿಕೆ ಇಲ್ಲದವರ ಮೊದ್ವೆ ಮಾಡ್ಸಿದ ಶಾಂತಿನ ಚಿಕ್ಕಮ್ಮ.ಇವರ ಮೊದ್ವೆಗೆ ಬೇಕಾದ ಚಿನ್ನ, ಬಟ್ಟೆ ತೆಗೆಕನ ಶಾಂತಿನೂ ಅವಳ ಮೊದ್ವೆ ಬಗ್ಗೆ ಕನ್ಸ್ ಕಾಂಬೊತ್ತಿತ್ತ್. ಎಲ್ಲ ಕೆಲ್ಸಗಳ ಶಾಂತಿ ಮಾಡಿ ತುಂಬಾ ಕುಸಿಲಿ ಇತ್ತ್.ಹೆಣ್ಮ್‌ಕ್ಕಳ ಗಂಡಂದಿರ್ ಕೇಳ್ದಷ್ಟ್ ಚಿನ್ನ, ಬೊದಿ, ಸಾಮಾನ್‌ಗಳ ತಕಂಡ್ ಗಂಡನ ಮನೆಗೆ ಹೋದ. "ಮುಂದೆನ ಹಂಗೆನೆ ನನ್ನ ಬಾಳ್"–ಂತ ಶಾಂತಿ ದಿನ ದೂಡಿಕಂಡ್ ಇತ್ತ್.

ಹಿಂಗಿರ್‌ಕನ ಅಂದ್ ಶಾಂತಿನ ಜೋಸ್ತಿನ ಮೊದ್ವೆಗೆ ಹೋದರ್‌ಲಿ ಒಂದ್ ವಿಷಯ ನಡ್ದಿತ್ತ್ ಆನಂದ–ಂತ ಒಬ್ಬ ಸಾಧಾರಣ ಕೃಷಿ ಇದ್ದ, ಗುಣವಂತ ಹಯ್ದ. ಶಾಂತಿನ ಪೊರ್ಲ್ಲನ ನೋಡಿ ಅವಳ ಮೇಲೆ ಇಷ್ಟ ಆಗಿ "ನಾನೇ ಇವಳ ಮೊದ್ವೆ ಆಕು"–ಂತ ಮನ್ಸ್‌ಲಿ ನೆನ್ಸಿತ್. ಚಿಕ್ಕಮ್ಮನ ಹೆಣ್‌ಮಕ್ಕಳ ಮೊದ್ವೆ ಆದ ಸುದ್ದಿ ಕೇಳಿ ಶಾಂತಿನ ಅಪ್ಪನ ಒಟ್ಟಿಗೆ ಮೊದ್ವೆಗೆ ಕೇಳ್ತ್.

"ನಾವಾಗಿ ಹೆಣ್ಣ್ ಕೊಟ್ಟವೆ–ಂತ ಯಾರ ಒಟ್ಟಿಗೆ ಹೇಳಿಕಾದ್ಲೆ?ಹೈದನೇ ಬಂದ್ ಕೇಳ್‌ಕನ ಹೆಂಗೆ ಇಲ್ಲೆ–ಂತ ಹೇಳ್ದು?" ಅವಳ ಅಪ್ಪ ಬಾರೀ ಕುಸಿಲ್ ಒಪ್ಪಿಕಂಡ.

## ಹೊಸ ಬೊದ್ಕು

ಅವಳ ಚಿಕ್ಕಮ್ಮಂಗೆ ಮನ್ಸ್ ಇಲ್ಲದರು ಎಲ್ಲವು ಇವಳ ಹಂಗಿಸುವ–ಂತ ಒಪ್ಪಿಕಂಡತ್.

ಕನ್ಸ್‌ಲಿ ಬಂದ್ ನನ್ನ ಅಮ್ಮ ಮೊದ್ವೆಗೆ ಹೋಗು–ಂತ ಯಾಕೆ ಹೇಳ್ದ್–ಂತ ಶಾಂತಿಗೆ ಈಗ ಅರ್ಥ ಆತ್. ಅಪ್ಪ, ಚಿಕ್ಕಮ್ಮ ಸೇರಿಕಂಡ್ ಹೆಸ್ರಿಗೆಗ ಮಾತ್ರ ಮೊದ್ವೆ ಮಾಡ್ಸಿ ಮೊದ್ವೆ ಮುಗ್ದ ಮೇಲೆ ಅವಳ ಚಿಕ್ಕಮ್ಮ ಲೆಕ್ಕಂದ ಹೊರಗೆ ಹಾಕಿದ. ಮೊದ್ವೆ ಆದ ಮೇಲೆ ಶಾಂತಿನ ಮನ್ಸ್‌ಗೆ ಯಾಗೊಳ ನೆಮ್ಮದಿ ಇತ್ತ್. ಚಿಕ್ಕಮ್ಮನ ಮಕ್ಕ ತುಂಬಾ ಸರ್ತಿ ಆಗಾಗ ಮನೆಗೆ ಬಂದ್ ದುಡ್ಡ್ ಕೇಳ್‌ತ್ತಿದ್ದ."ಗಂಡನ ಮನೇಲಿ ಹಿಂಸೆ ತಡಿಯಕೆ ಆಗದೆ–ತವರ್ ಮನೆಲಿ ಯಾಗ ಬಂದ್ ಉಳ್ದ್"ವೆ–ಂತ ಹೆದ್ರಿಕೆ ಆದರೆ, ಇನ್ನೊಂದು ಕಡೆಲಿ ಪುಳ್ಳಿಗಳ ಕನ್ಸ್ ಕಂಡ್ರೆ ಅವ್ಕೆ ಯಾವ ಯೋಗ್ಯತೆನೂ ಇಲ್ಲದ ಗಂಡಂದಿರಿಗೆ ಹೆಣ್ಮ್‌ಕ್ಕ ತರುವ ದುಡ್ಡು ಮಾತ್ರ ಬೇಕಾಗಿತ್ತ್. ಶಾಂತಿಗೆ ತಾಯ್ತನದ ಭಾಗ್ಯ ಸಿಕ್ಕಿ ಕೈ ಹಿಡ್ದ ಆನಂದ ಹೆಣ್ಣ್‌ನ ಲಾಯ್ಕಲಿ ನೋಡುವ ಆನಂದನ ಕುಸಿಗೆ ಲೆಕ್ಕನೇ ಇತ್ಲೆ. ಅಪ್ಪ, ಚಿಕ್ಕಮ್ಮಂಗೆ ಇವಳ ಸುಖದ ಜೀವನನ ಕಣ್ಣ್ ತುಂಬಾ ನೋಡಿಕೆ ಅವಳ ಮನೆಗೆ ಹೋದ. ಚಿಕ್ಕಮ್ಮ ಇನ್ನೂ ಬದಲಾತ್ಲೆ. ಆದ್ರೆ ಚಿಕ್ಕಮ್ಮನ ಮನ್ಸ್ ಬದಲಾಗುವ ಕಾಲ ಬಂದಿತ್ತ್.

ಅವರ ಮಕ್ಕಳ ಬಾಳ್ ಹಾಳಾಗಿ ನೆಮ್ಮದಿ ಇಲ್ಲದ ಮೇಲೆ ಹೆಂಗೆ ಜೀವನ ಮಾಡ್ದು? ಇದ್ದ ದುಡ್ಡು, ಚಿನ್ನ ಗಂಡಂದಿರ ಪಾಲಾತ್. ಇನ್ನ್ ಒಳಿಯಕೆ ತಕ್ಕ ಒಂದ್ ಮನೆ ಇತ್ತ್. ಈಗ ಆ ಮನೆನ ಮಾರಿ ಸಿಕ್ಕಿದ ದುಡ್ಡ್‌ನ ಮಕ್ಕಳಿಗೆ ಕೊಟ್ಟು ಬಾಕನ "ನಾವ್ಗೆ ಯಾಕೆ ಬೇಕಾಯ್ತ್ ಇಂತವುಕೆ ಮೊದ್ವೆ ಮಾಡುವ ಕೆಲ್ಸ?" ಮಾತಾಡಿಕಂಡ್ ಕೈ ಕೈ ಹಿಡ್ಕಂಡ್ ನೆಡು ರೋಡ್‌ಲಿ ದಾಟ್‌ತ್ತಿದ್ದಾಂಗೆ ಕುಡ್ತ್‌ದ ಅಮುಲ್‌ಲಿ ಇದ್ದ ಜೀಪು ಡ್ರೈವರ್ ಹಿಂದೆಂದ ಬಂದ್ ಗುದ್ದಿದ್ ಒಂದೇ ಗೊತ್ತ್. ಸಾವು ಬೊದ್ಕುನ ಒಟ್ಟಿಗೆ ನರ್‌ಳಿದ ಅಪ್ಪ ಅಲ್ಲೇ ಜೀವ ಬುಟ್ಟ. ಸೊಯ ತಪ್ಪಿದ ಚಿಕ್ಕಮ್ಮನ ಗುರ್ತ ಇಲ್ಲದವು ಆಸ್ಪತ್ರೆಗೆ ಸೇರ್ಸಿ ಶಾಂತಿಗೆ ಹೇಳಿ ಕಳ್ಸಿದ.ಅವರ ಸೊಂತ ಮಕ್ಕಳಿಗೆ ಈ ವಿಷಯ ಗೊತ್ತಿದ್ದರೂ ಅಮ್ಮನ ನೋಡಿಕೆ ಬಾತ್ಲೆ.

ಇನ್ನ್ ಮುಂದೆಗೆ ಬಂದವೆ–ಂತ ಯಾವ ಗ್ಯಾರಂಟಿ?ಹಾಸಿಗೆ ಹಿಡ್ದ ಚಿಕ್ಕಮ್ಮನ ನೋಡಿಕಣುವ ಹೊಣೆ ಶಾಂತಿಗೆ ಆತ್. ಅಂದ್ ಶಾಂತಿಗೆ ಕೊಟ್ಟ ಕಷ್ಟಗಳ ಹಂಗಿಸಿದ ಮಾತ್‌ಗ ಚಿಕ್ಕಮ್ಮಂಗೆ ನೆನ್ಪಾಗಿ ಶಾಂತಿನ ತಬ್ಬಿಕಂಡ್ ಕಣ್ಣೀರ್ ಹಾಕಿದ. "ನೀವು ಧೈರ್ಯಲಿ ಇದ್ದರೆ ನೀವು ಬೇಗ ಹುಷಾರ್ ಆಗ್‌ವರಿ" ಚಿಕ್ಕಮ್ಮಂಗೆ ಸಮಾಧಾನ ಹೇಳಿ ಅವಳ ಎಲ್ಲ ಹೇಸಿಗೆನ ಶಾಂತಿನೇ ತೆಗಿತಿತ್ತ್. "ಅಬ್ಬಾ! ಚಿಕ್ಕಮ್ಮಂಗೆ ಈಗಾದ್ರ್ ನನ್ನ ಮೇಲೆ ಕರುಣೆ ಬರುವ ಕಾಲ ಬಾತಲ್ಲ"–ಂತ ಶಾಂತಿನ ಮನ್ಸ್‌ಗೆ ಕುಸಿ, ಆನಂದ ಆತ್.

* * * * * *

# ಅಮ್ಮಂಗೆ ಕೊಟ್ಟ ಮೊರ್ಯಾದಿ

ಅಂದ್ ಮಂಗ್ಲ್ ವಾರ, ಸಾವಿರ ಸಂಖ್ಯೆಲಿ ತುಂಬಿದ ಜನ. ಇನ್ನೇನ್ ಹಂಞ ಹೊತ್ತ್‌ಲಿ ಸನ್ಮಾನ ಮಾಡಿಕೆ ಸುರು ಆಗಿತ್ತ್. ತುಂಬಿ ತುಳುಕುವ ಜನಗಳ ನೆಡುಲಿ ಒಂದ್ ಕಣ್ಣ್‌ನ ಬುಟ್ಟ್ ನೋಡ್‌ತ್ತಿದ್ದ ಅಜ್ಜಿ ಗೌರಿ ಕುದ್ದಿದ್ದ.

ಪ್ರಾಯಸ್ಥರ, ಮತ್ತೆ ಮಕ್ಕಳ ಕೆಲ್ಸ ಇದರ ಬಗ್ಗೆ ಬರ್ದ ಪ್ರಬಂಧಕೆ, ರಾಧಕೃಷ್ಣನ ಸನ್ಮಾನ ಮಾಡಿಕೆ ಬೆಂಗಳೂರುನ ವಿಶ್ವವಿದ್ಯಾನಿಲಯ ಕರ್ದಿತ್ತ್.

ದೂರದ ಅಮೆರಿಕಾಂದ ಗಂಡ, ಹೆಣ್ಣ್, ಮಂಜ ಬಂದ್ ಇಳ್ದ. ಅಮೆರಿಕಲಿ ಇದ್ದರು ಕನ್ನಡನ ಮರಿಯದೆ ಬುಡ್ಸಿ ಬುಡ್ಸಿ ಬರ್ದಿತ್ತ್. ಕೂಸುಗೆ ಕಣ್ಣ್ ಕೈಕಾಲ್ ಹುಟ್ಟಿದಲಿಂದ ಬೊದ್ಕು ನಡ್ಸುವ ವರೆಗೆ, ಅಪ್ಪ-ಅಮ್ಮನ ಬಗ್ಗೆ, ಮಕ್ಕಳ ತ್ಯಾಗ, ಪ್ರೀತಿ, ಹೆಣ್ಣ್ ಮಕ್ಕಳ ಫ್ಯಾಶನ್, ಅಣ್ಣ, ತಮ್ಮ ಪಾಲ್ ಮಾಡಿಕಂಡ್ ಅಪ್ಪ-ಅಮ್ಮನ ಪಾಲ್ ಮಾಡ್ದು, ಪ್ರಾಯಸ್ಥರ ಒಟ್ಟಿಗೆ ಹೆಂಗೆ ಇರ್ದು. ಅವ್ಕೆ ಹೆಗ್‌ಲ್‌ಗೆ ಹೆಗ್‌ಲ್ ಕೊಟ್ಟ್ ಆಧಾರ ಆಕುಂತ ಬರ್ದ ರಾಧಕೃಷ್ಣನ ನೆನ್ಪ್ ಶಕ್ತಿ ಬುದ್ಧಿವಂತಿಕೆಲಿ ಎಲ್ಲ ಶಬ್ಧಗಳ ಒಟ್ಟ್ ಸೇರ್ಸಿ ಓದುವವರ ಎದೆ ಒಳೆಗೆ ಹುಗುವ ಹಂಗೆ ಇತ್ತ್.

ಅದರ ಫಲನೆ ರಾಧಕೃಷ್ಣಂಗೆ ಸಿಕ್ಕಿದ ಪ್ರಶಸ್ತಿ ಡಾಕ್ಟರೇಟ್. ಒಮ್ಮೆಗೆ ವೇದಿಕೆ ಮೇಲೆ ಜನ ಸೇರುವ ಹಂಗೆ ಆತ್. ರಾಧಕೃಷ್ಣ ಅವನ ಹೆಣ್ಣ್, ಮಂಜನ ಒಟ್ಟಿಗೆ ನಿದಾನಲಿ ವೇದಿಕೆ ಹತ್ತಿತ್. ಇಡೀ ಸಭಾಂಗಣವೇ ರಾಧಕೃಷ್ಣಂಗೆ ಎದ್ದ್ ನಿತ್ತ್ ಗೌರವ ಕೊಡ್‌ತ್ತಿತ್.

'ಏಯ್! ಕಪ್ಪು ಕೋಟ್ ಒಳೆಗೆ ನೀಲಿ ಶರ್ಟ್ ಹಾಕಂಡ್ ಒಳ, ಅವೇ ರಾಧಕೃಷ್ಣ' ಹಕ್ಕಲೆ ಕುದ್ದ ಗೂಡೆ ಹೇಳ್‌ಕನ ಗೌರಿ ಒಂದ್ ಕಣ್ಣ್‌ನ ಮತ್ತಷ್ಟ್ ಅಗಾಲ್ಸಿ ವೇದಿಕೆ ಕಡೆ ನೋಡ್ದ. ಕುಸಿಲಿದ್ದ ಗೌರಿ ಮಂಜನ ನೋಡಿ, ಮನ್ಸ್ ಒಳೆಗೆ ನೆಗಾಡಿಕಂಡಿದ್ದ.

'ಮಂಜ ನಿಂಗೆ ಯಾಗೊಳ್ ಇಂತ ಗೌರವ ಸಿಕ್ಕಲಿ. ಅಪ್ಪ ಇದ್ದಿದ್ದರೆ ಅವ್ಕೆ ಎಷ್ಟೋ ಕುಸಿ ಆಗಿತ್'

ಕಣ್ಣ್‌ಂದ ಒಂದೊಂದೇ ಹನಿಗ ಬೀಳ್ತಿತ್ತ್.

'ಯಾಕೆ ಅವ್ವ ನೀವು ಮರ್‌ಡ್ತ ಒಳರಿ? ಅವರ ನಿಗ್ಗೆ ಗುರ್ತ ಉಟ್ಟಾ? ಅವು ಕರ್ನಾಟಕದವು ಆದರು ತುಂಬಾ ವರ್ಷಂದ ಅಮೆರಿಕಲಿ ಒಳದ್‌ಂತ ಕೇಳ್ದೆ' ಅನುಮಾನಲಿ ಕೇಳಿತ್ ಗೂಡೆ. ಒಮ್ಮೆ ಗೂಡೆನ ಕಡೆ ನೋಡಿ ಏನೋ ಮರ್ತ್ ಹೋದವರಾಂಗೆ ಕಣ್ಮ್‌ಚ್ಚಿದ.

ವೇದಿಕೆಲಿ ಪ್ರಾರ್ಥನೆ ಒಟ್ಟಿಗೆ ಕಾರ್ಯಕ್ರಮ ಸುರು ಆತ್. ಗೌರಿನ ಮನ್ಸ್ ಕಳ್ದ ದಿನಗಳ ಕಡೆ ಹೋಗಿತ್ತ್.

ಅಪ್ಪ, ಅಮ್ಮ ಇಲ್ದೆ ಚಿಕ್ಕ್ಮನ ಒಟ್ಟಿಗೆ ಬೆಳ್ದ್, ನೋಡಿಕೆ ಅಷ್ಟೊಂದ್ ಪೊರ್ಲು ಇಲ್ಲದರು, ದಯೆ, ದಾಕ್ಷಿಣೆ, ಕ್ಷಮೆ, ಅವಳ ಮನ್ಸ್‌ಲಿ ಮನೆ ಮಾಡಿತ್ತ್.

## ಹೊಸ ಬೊದ್ಕು

ಸಾಧಾರಣ ರೂಪ ಹೊಂದಿರು ಗುಣಲಿ ದೇವತೆ ಆಗಿತ್ತ್. ಗಂಡ ಪರಮೇಶಂಗೆ ಹೇಳಿಕಂಬಂತ ಶ್ರೀಮಂತಿಕೆ ಇತ್ಲೆ. ಸಣ್ಣ ಸಂಸಾರಕೆ ಬೇಕಾದಂಗೆ ಎಲ್ಲ ವ್ಯವಸ್ಥೆಗಳ ಮಾಡಿಕಂಡ್ ಗೌರಿನ ಮೊದ್ವೆ ಆಗಿ ಹೆಣ್ಣ್, ಅಮ್ಮನ, ಒಟ್ಟಿಗೆ ಜೀವನ ಸಾಗ್ಸಿತ್ತಿದ್ದ. 'ಗೌರಿ ಇಂದ್ ಎಂತ ತಿಂಡಿ ಮಾಡ್ದ'ಂತ ಬೊಳ್ಪು ಆದರೆ 'ಕತ್ತಲೆಗೆ ಊಟ ಮಾಡ್'ಂತ ಹೇಳ್‌ವ ಅತ್ತೆನ ಮಾತ್‌ನ ಒಟ್ಟಿಗೆ ಆ ಮನೆ ಮಲ್ಗ್‌ತ್ತಿತ್. ಅತ್ತೆ, ಸೊಸೆನ ಪ್ರೀತಿನ ಕಂಡ್, ಪರಮೇಶ ಯಾವ ಕಷ್ಟಲಿ ಇದ್ದರು, ಅದೆಲ್ಲ ಇವರ ಮೋರೆ ನೋಡ್‌ಕನ ಮರ್ತ್ ಹೋಗ್‌ತ್ತಿತ್ತ್ ಅತ್ತೆ, ಸೊಸೆ, ಹಾಲ್ ಜೇನ್‌ನ ಹಂಗೆ ಇದ್ದ.

ಅತ್ತೆ, ಸೊಸೆ, ಜಗಳ ಕೇಳ್ತಿದ್ದ ಪರಮೇಶನ ಜೋಸ್ತಿಗಳ ತಲೆ ಕೆಟ್ಟ್ ಹೋದ. ಅವರ ಕಥೆಗಳ ಹೇಳ್‌ಕನ, ನಮ್ಮ 'ಮನೆಲಿ ಅಮ್ಮ, ಮಗಳ ಹಂಗೆ ಒಳ ಅಂತ ಕುಸಿಲಿ ಹೇಳ್ತಿತ್ತ್' ನೀನೇ ಪುಣ್ಯವಂತ, ಅಂತ ಅತ್ತೆ ಸೊಸೆನ ಪಡಿಯಕೆ, ನಮ್ಮ ಮನೆಲಿ ಅತ್ತೆ, ಮಾತಾಡ್ರೆ ಸೊಸೆಗಾದ್ಲೆ, ಸೊಸೆ ಮಾತಾಡ್ರೆ ಅತ್ತೆಗಾದ್ಲೆ. ಒಬ್ಬರ ಪರ ಮಾತಾಡ್ರೆ ಒಬ್ಬಂಗಾದ್ಲೆ. ಅವನ ಜೊಸ್ತಿಗ ಸಂಸಾರದ ಕತೆಗಳ ಹೇಳಿಕಂಬತ್ತಿದ್ದ. ಇವರ ಸಮಸ್ಯೆಗಳ ಕೇಳಿ ಪರಮೇಶಂಗೆ ಮತ್ತೂ ಕುಸಿ ಆಗ್ತಿತ್ತ್.

ಒಮ್ಮೊಮ್ಮೆ ಪರಮೇಶ, ಹೆಣ್ಣ್, ಅಮ್ಮನ, ಒಟ್ಟಿಗೆ ಈ ಕಥೆಗಳ ಹೇಳ್ತಿತ್ತ್.

'ಎಲ್ಲವು ಹೊಗುಳುಕುಂತ ತೋರಿಕೆಗೆ, ನಮ್ಮ ಪ್ರೀತಿ ಅಲ್ಲ. ಕಡೆವರೆಗೂ ನಾವು ಹಿಂಗೆ ಇರೊಕು ಅಲ್ಲ, ಅತ್ತೆ'

'ಹೌದು ಮಗಳೆ ಹಿಂಗೆ ಇರೊಕು'

'ಆ ನಿಮ್ಮ ಇಬ್ಬರ ಪ್ರೀತಿಲಿ ನನ್ನ ಮರ್ತ್‌ರೆ' ಪರಮೇಶ ನೆಗಾಡಿಕಂಡ್ ಹೇಳ್ತ್.

'ಗೌರಿ ಯಾಕೆನೆ ಎದ್ದತ್ಲೆ? ಯಾಗೊಳ್ ನನ್ನಂದ ಮುಂದೆ ಎದ್ದ್ ಎಲ್ಲ ಕೆಲ್ಸ ಮಾಡ್ತಿದ್ದ'.!

'ಅತ್ತೆ ನಂಗೆ ತಲೆ ತಿರ್‍ಗ್ತ ಉಟ್ಟು, ವಾಂತಿ ಬಂದಾಂಗೆ ಆಗ್ತುಟ್ಟು ಯಾಕೆ ಗೊತ್ಲಾದೆ.'

'ಎಂತ್ಲಾತ್ ಗೌರಿ?'

'ಪರಮೇಶ ನೀ ಇಂದ್ ಕೆಲ್ಸಕೆ ಹೋದು ಬೇಡ. ಗೌರಿನ ಆಸ್ಪತ್ರೆಗೆ ಕರ್‍ಕಂಡ್ ಹೋಗು. ಸರಿಯಾಗಿ ಉಟ ಮಾಡದೆ ಎರಡ್-ಮೂರ್ ದಿನ ಆತ್. ಒಳ್ಳೆ ಸುದ್ದಿ ಕೇಳುವ ಹಂಗೆ ಇರ್‍ದ್!! ಮುದಿ ಜೀವ ಆಸೆಲಿ ಹೇಳ್ದ.

ಪೊರ್‍ಲುನ, ಕೂಸುನ ಕಾಣದ್, ಈ ಮನೇಲಿ ಒಂದೇ ಒಂದ್ ಕೊರ್‍ತೆ ಆಗಿತ್ತ್. ಬೊಳ್ಪುಗೆ ಆಸ್ಪತ್ರೆಗೆ ಕರ್‍ಕಂಡ್ ಹೋದ ಇಬ್ಬೊರು ಒಳ್ಳೆ ಸುದ್ದಿನ ಒಟ್ಟಿಗೆ ಬಂದಿದ್ದ.

'ಅಮ್ಮಾ ನಿಂಗೆ ಒಳ್ಳೆ ಸುದ್ದಿ, ನೀ ಅಜ್ಜಿ ಆದಿಯ'

'ಹೌದಾ! ಗೌರಿ' ಗೌರಿನ ತಲೆ ಪೂಜಿ ಕೇಳ್‌ಕನ ಗೌರಿ ನಾಚಿಕೆಲಿ ತಲೆ ಆಡ್ಸಿತ್ತ್. 'ಅಂದರೆ ಇಂದ್‌ಂದ್ ನಾ ಹೇಳ್ದಾಂಗೆ ನೀ ಕೆಳಕು. ನಾ ಕೊಟ್ಟದರನ್ನೆ ತಿನ್ನೊಕು.' ಅತ್ತೆನ ಪಟ್ಟಿ ಒಂದೊಂದೆ ಬೆಳ್ಕಂಡ್ ಹೋಗ್ತಿತ್ತ್.

* * * * *

ಅತ್ತೆನ ಆರೈಕೆಲಿ ಗೌರಿ ಹಂಞ ದಪ್ಪ ಆಗಿತ್ತ್. ಬೊಸುರಿ ಹೆಂಗ್ಸ್ ಯಾಗೋಳು ಪೊರ್ಲುಞ ಪೊರ್ಲುಞ ಆಗಿ ಕಾಂಬೊತಿತ್ತ್. ಹೆಣ್ಣ್ ಮಕ್ಕಳಿಗೆ ಹೆರ್ಗೆ ಆಕೆ ತೌವ್ರು ಮನೆಗೆ ಕರ್ಕಂಡ್ ಹೋದವೆ. ಆದರೆ ಗೌರಿಗೆ ಅಮ್ಮ ಇಲ್ಲದೆ ಚಿಕ್ಕಮ್ಮನ ಒಟ್ಟಿಗೆ ಇದ್ದ್ ಅವರ ಮನೆಗೆ ಕಳ್ಸದೆ, ಅತ್ತೆನೆ,  ಬಯ್ಕೆ, ಬಾಣಂತಿ, (ಪೆದ್ದೊಳ್ತಿ) ನೋಡ್ದ. ಮಂಜ, ಅಮ್ಮನ ಒಟ್ಟಿಗೆ ಕೇಳ್ದೆ ಬೊಸುರಿ ಹೆಣ್ಮಕ್ಕಳಿಗೆ ಏನೆಲ್ಲ ಆಸೆ ಇದ್ದದೆಂತ.

'ಅಮ್ಮ, ಮಂಜ ಸೇರಿ ಎಲ್ಲ ಕ್ರಮಗಳ ಮಾಡಿ... ಗೌರಿಗೆ ತಾವ್ರು ಮನೆ ನೆನ್ಪ್ ಬರದಾಂಗೆ ಮಾಡ್ದ. ನೆರೆ, ಕರೆ ಮನೆವು ಬಂದ್ ಆರತಿ ಮಾಡಿ ಹರ್ಸಿದ. ಗೌರಿಗೆ ಎಂತಲ್ಲ ಇಷ್ಟ ಉಟ್ಟು ಅದರೆಲ್ಲ ಅತ್ತೆ ಮಾಡಿ ಕೊಟ್ಟ. 'ಅತ್ತೆ ಮುಂದೆನ ಜನ್ಮ ಇದ್ದರೆ, ನಾ ನಿಮ್ಮ ಮಗಳಾಗಿ ಹುಟ್ಟಿ ಬನ್ನೆ. ನನ್ನ ಅಮ್ಮ ಕೊಡುವ ಪ್ರೀತಿನ ನಂಗೆ ಕೊಟ್ಟಳರಿ' ಗೌರಿನ ಕಣ್ಣ್‌ಲಿ ನೀರ್ ಹನಿ ಹನಿ ಆಗಿ ಬಾತ್.

'ಬೊಸುರಿ ಹೆಣ್ಮಕ್ಕ ಇಂತ ಮಾತ್‌ಗಳ ಹೇಳಿಕಾಗದ್ ಗೌರಿ. ನಿ ನನ್ನ ಸೊಸೆ ಅಲ್ಲ. ಮಗಳೆ. ನಾವ್ಗೆ ಮನೆ ಬೆಳ್ಗುವ ಪೊರ್ಲುನ ಕೂಸು ಆದರೆ ಸಾಕ್' ಮನ್ಸ್‌ಲಿ ಹರ್ಸಿದ. ಅವರ ಆಸೆನಾಂಗೆ ಗಂಡ್ ಕೂಸುನ ಹೆತ್ತಿತ್ತ್ ಗೌರಿ. ಹೊಳ್ಪುವ ಚಂದ್ರನಾಂಗೆ ಇದ್ದ ಕೂಸುಗೆ ಒಂದ್ ತಿಂಗ ಆಕಂಡ್ ಬಾಕನ ಹೆಸ್ರ್ ಇಸುವೆ.

'ಮಂಜ ನಾ ತುಂಬಾ ಓದಿತ್ಲೆ. ನೀವು ಇಬ್ಬೊರ್ ಸೇರಿ ಒಳ್ಳ ಹೆಸ್ರ್ ಇಸಿ' ಅಜ್ಜಿನ ಮಾತ್‌ನ ಹಂಗೆ ಕೂಸುನ ಕೆಬಿ ಹಕ್ಕಲೆ ಐದ್ ಸರ್ತಿ ರಾಧಕೃಷ್ಣ–ಂತ ಗೌರಿ ಹೇಳ್ತ್. ಅಂದ್‌ಂದ ಆ ಮನೆಲಿ ರಾಧಕೃಷ್ಣನ ನೆಗೆ, ಮರ್ಡ್ಟ, ತುಂಬಿ ಹೋಗಿತ್ತ್. ಅಜ್ಜಿನ ಕೊಂಡಾಟಲಿ, ಅಪ್ಪ, ಅಮ್ಮನ, ಪ್ರೀತಿಲಿ ರಾಧಕೃಷ್ಣಂಗೆ ಯಾವ ಕೊರ್ತೆ ಇಲ್ಲದಾಂಗೆ ಬೆಳ್ದಿತ್ತ್.

ಕೂಸು ಹರ್ಕಂಡ್ ಬರುವ ಹೊತ್ತ್‌ಲಿ ಅತ್ತೆ–ಸೊಸೆ, ಇಬ್ಬೊರ್ ಬಾರಿ ಕುಲಿಸಿ ಇದ್ದ. ಬಾಗ್‌ಲ್ ದಾಟುವ ಸಮಯಲಿ ಅಜ್ಜಿ ಕಾಯಿ ಒಡ್ದ್ ದೃಷ್ಟಿ ತೆಗ್ದ.

ದಿನ ಕಳ್ದಾಂಗೆ ಒಂದಿನ ಅತ್ತೆಗೆ ಉಷಾರ್ ಇಲ್ಲದಾಂಗೆ ಆಗಿತ್ತ್. 'ಅತ್ತೆ ಉಪಾಸ ಮಲ್ಗಿರೆ ನಿದ್ದೆ ಬಾಕಿಲೆ!!–ಂತ ಊಟಕೆ ಒತ್ತಾಯ ಮಾಡಿತ್ತ್ ಗೌರಿ. ಊಟದ ಬಟ್ಲ್ ಒಟ್ಟಿಗೆ ಬಂದ ಗೌರಿನ ಕಂಡ್, ಅತ್ತೆಗೆ ಬಂದ ಕಣ್ಣೀರ್ ತಡೆಕಾದ್ಲೆ.

'ನಂಗೆ ಏನ್ ಆತ್ಲೆ ಗೌರಿ, ನೀ ಇಲ್ಲಿ ಬಾ, ನನ್ನ ಹಕ್ಕಲೆ ಬಾ! ಹಕ್ಕಲೆ ಕರ್ದ್ ತಲೆ ಪೊಜಿ ಅವಳ ಕೆನ್ನೆನ ಹಿಡ್ದ್ ಕೇಳ್ದ. 'ಗೌರಿ... ನನ್ನ ಹಕ್ಕಲೆ ನಿ ಯಾಗೊಳ್ ಒಳ ಅಲ್ಲಾ'? 'ಅತ್ತೆ ಇಂದ್ ಯಾಕೆ ಏನೆನೋ ಮಾತಾಡ್ದು? ನಾ ಎಲ್ಲಿಗೆ ಹೋನೆ? ಈಗ ನೀವು ಸುಮ್ಮನೆ ಮಲ್ಗಿ' ಅತ್ತೆನ ಸಮಧಾನ ಮಾಡ್ತ್.

'ಅಂದ್ ರಾತ್ರೆ ಆದರು ತುಂಬಾ ಹೊತ್ತ್‌ನವರೆಗೆ ಅಜ್ಜಿಗೂ, ಗೌರಿಗೂ ನಿದ್ದೆ ಇತ್ಲೆ. ಅತ್ತೆನ ಕಾಲ್ ಪೊಜಿಕಂಡ್ ಅಲ್ಲೆ ಕುದ್ದಿತ್ತ್. ಬೆಳ್ಗ್‌ಜ್ರ ಆಕನ 'ಗೌರಿ... ಪರುಶು...'ಂತ ಅಜ್ಜಿನ

ನರ್ಕ್ಕಟ ಜೋರಾತ್ 'ಅತ್ತೆ ಅತ್ತೆ ಏನಾತ್?' ಅಮ್ಮನ ಹಣೆ ಮೇಲೆ ಹರಿವ ಬೆಗ್‌ರ್‌ನ ಕಂಡ ಪರಮೇಶ ಹೆದ್ರಿ ಹೋತ್. 'ಪರಶು ಯಾಕೆ ಗೊತ್ಲೆ ಮಂಜ ಎದೆ ಬೇನೆ ಆಗ್ತುಟ್ಟು. ತಡಿಯಕೆ ಆದ್ಲೆ ಮಂಜ... 'ಗೌರಿ... ಪರಶು...' ಬೊಬ್ಬೆ ಹಾಕಿದ ಅಜ್ಜಿಗೆ ಮಾತಾಡಿಕೆ ಆಗದೆ ಅಮ್ಮನ ಹಂಗೆ ಇದ್ದ ಅತ್ತೆನ ಜೀವನ ಯಾತ್ರೆ ಮುಗ್ದ್ ಹೋಗಿತ್ತ್. ಆ ಮನೆಲಿ ಹಿರಿ ಜೀವದ ನೆನ್ಪ್ ಬುಟ್ಟ್ ಹೊತ್. ಅಮ್ಮ ಸತ್ತ್ ಒಂದು ವರ್ಷ ಆಕನ ಮಂಜ ಪರಮೇಶಂಗೆ ಉಷಾರ್ ಇಲ್ಲದೆ ಗಂಡನ ಕಳ್ಕಣ್‌ತ್ತ್ ಗೌರಿ. ಕಾಲ ಎಲ್ಲದರ ಮರ್ಸಿ ಯಾರೂ ನಂಬಿಕೆ ಆಗದ ಸಾವು ಅದರ ಕೆಲ್ಸ ಮಾಡಿ ಮುಗ್ಸಿತ್.

ಅತ್ತೆ, ಗಂಡನ ಬುಟ್ಟ್ ನಿಲ್ಲಿಕೆ ಆಗದ ಗೌರಿನ, ಆ ಮನೆನ ಲಕ್ಷಣ ಕಳ್ದ್ ಹೋತ್.

ದಿನ ಬೇಗ ಬೇಗನೆ ಒಡ್ತಾ ಇತ್ತ್. ರಾಧಕೃಷ್ಣ ಶಾಲೆಗೆ ಹೋಕೆ ಸುರು ಮಾಡ್ತ್. ಜೀವನ ನಡ್ಸಿಕೆ ಕಷ್ಟ ಇದ್ದ ಗೌರಿಗೆ, ಅಪ್ಪ ಇಲ್ಲದ ಮಂಜ, ರಾಧಕೃಷ್ಣಂಗೆ ಅಪ್ಪನ ಸ್ಥಾನಲಿ ನಿತ್ತ್. ನಾಲ್ಕ್ ಮನೆಲಿ ಬಟ್ಟೆ ಒಗ್ದ್, ನಾಲ್ಕ್ ಮನೆಲಿ ಪಾತ್ರೆ ತೊಳ್ದ್, ಬರುವ ದುಡ್ಡ್‌ಲಿ ಕೂಸ್‌ಗೆ ವಿದ್ಯೆ ಕಲ್ಸಿತ್. ಹಿಂಗೆ ಕಲ್ತ್ ದೊಡ್ಡ ಕ್ಲಾಸ್‌ಗೆ ಹೋಕನ ಅವನ ಶಾಲೆ ಫೀಸ್ ಕಟ್ಟಿಕೆ ಗೌರಿ ಹೋಗಿತ್ತ್. ಅವನ ಅಮ್ಮ ಅವನ ಶಾಲೆಗೆ ಹೋದ್ ಬಾರೀ ದೊಡ್ಡ ಅಪರಾಧ ಆಗಿತ್ತ್. ಅಂದ್ ಹಿಂಬೋತ್ತ್ ಶಾಲೆ ಬುಟ್ಟ್ ಬಂದ ಮಂಜ ಅವನ ಚೀಲನ ತೆಗ್ದ್ ಅಮ್ಮನ ಕಾಲ್ ಬುಡಕೆ ಸಿಟ್ಟ್‌ಲಿ ತೇಗ್ದ್ ಹೊಡ್ತ್.

'ಮಂಜ ಏನಾತ್ ನಿಂಗೆ' 'ಅಮ್ಮ ಇಂದ್ ನೀ ಶಾಲೆಗೆ ಯಾಕೆ ಬಂದದ್ದ್?' 'ನಾ ನಿನ್ನ ಫೀಸ್ ಕಟ್ಟಿಕೆ ಬಂದೆ ಮಂಜ' 'ನಿಂಗೆ ಎಷ್ಟ್ ಸರ್ತಿ (ಸರ್ರಿ) ಹೇಳ್ದು ನನ್ನ ಶಾಲೆಗೆ ನೀ ಬಾದು ಬೇಡಾಂತ? ನೀ ಆ ಒಂದ್ ಕಣ್ಣ್‌ನ ಹೊತ್ತ್‌ಕಂಡ್ ಬಂದಿಯ. ಆ ಒಂದು ಕಣ್ಣ್‌ನ ನೋಡಿ ಎಷ್ಟ್ ಮಕ್ಕ ನನ್ನ ತಮಾಷೆ ಮಾಡಿ ನೆಗಾಡ್ದ. ನಿನ್ನ ಅಮ್ಮ ಒಕ್ಕಮ್ಮಂತ ನಂಗೆ ಎಷ್ಟ್ ನಾಚಿಕೆ ಆತ್. ನಿಂಗೆ ಗೊತ್ತುಟಾ? ಇನ್ನ್ ಮುಂದೆ ನನ್ನ ಶಾಲೆಗೆ ಬಾದು ಬುಡ್, ಮನೆ ಮೆಟ್ಟ್‌ಕಲ್ ಇಳ್ದರೆ ಜಾಕ್ರತೆ ನನ್ನ ಮೇಲೆ ಆಣೆ ಇನ್ನ್ ಬಂದರೆ ನನ್ನ ಮನೆ ಕೆಲ್ಸದವುಂತ ಹೇಳಿನೆ' 'ಹೌದಾ! ಮಂಜ ನಂಗೆ ಒಂದು ಕಣ್ಣ್ ಒಳದ್, ಅಮ್ಮಂತ ಕರೆಯಕೆ ನಾಚಿಕೆ ಆದರೆ ತೊಂದರೆ ಇಲೆ ಮಂಜ. ಆದರೆ ನೀ ಕಲಿದರ ಮಾತ್ರ ನಿಲ್ಸುದು ಬೇಡ' ಮಂಜಂಗೆ ವಿದ್ಯೆ ಕಲ್ಸಿಕೆ ಹಿಂದೆ, ಮುಂದೆ ನೋಡ್ತ್‌ಲೆ ಗೌರಿ, ಕೆಲ್ಸ ಸಿಕುವಲ್ಲಿಗೆ ಮುಟ್ಟ ಕಲ್ಸಿತ್. ಕಲ್ತ್ ದೊಡ್ಡ ಕೆಲ್ಸ ಸಿಕಿತ್ ಅವಂಗೆ. 'ಮಂಜ ನೀ ಕೆಲ್ಸಕೆ ಹೋದು ಸರಿ. ಆದರೆ ಈ ದೇಶ ಬುಟ್ಟ್ ಎಲಿಗೂ ಹೋದು ಬೇಡ' 'ನಿಂಗೆ ಗೊತ್ಲೆ ಅಮ್ಮ ಇಲ್ಲಿ ನರ್ಕ ಬಾದು ನಂಗೆ ಇಷ್ಟ ಇಲ್ಲೆ. ಇಲ್ಲಿ ಕೆಲ್ಸ ಮಾಡ್ರೆ ಏನ್ ಬೆಲೆ ಉಟ್ಟು? ಒಳ್ಳೆ ಸಂಪಾದನೆ ಮಾಡ್ರೆ ಅದ್ಕೆ ಇರುವ ಬೆಲೆನೆ ಬೇರೆ' ಹೆಸರ್, ದುಡ್ಡು ಮಾಡುವ ಮಂಜನ, ಆಸೆನ ಮಾತ್‌ಗೆ, ಅವನ ಆಸೆನಾಂಗೆ ಅಮೇರಿಕಾಕೆ ಹೋರ್ಟಿತ್ತ್.' ಮಂಜ ನೀ ದೂರ ಹೋದು ನಂಗೆ ಇಷ್ಟ ಇಲ್ಲೆ' 'ಹೌದಮ್ಮ ಈಗ ನಾ ಏನ್ ಸಣ್ಣ ಕೂಸ್ ಅಲ್ಲ ನಿನ್ನೊಟ್ಟಿಗೆ ಇರಿಕೆ' ಗೌರಿಗೆ ಈಗ ಕಾದ ಕಬ್ಬಿಣ

ಇಸಿದಾಂಗೆ ಆತ್. ಅಮ್ಮನ ಮಾತ್ ಲೆಕ್ಕಕೆ ತಕಣದೆ ಹೊರ್ಟ್ ಹೋತ್. ಹಾಂಗೆ ಹೋದವ ಎರಡ್ ವರ್ಷ ಕಳ್ದ್ ಊರಿಗೆ ಬಾತ್. 'ಅಮ್ಮ ದೊಡ್ಡ ಕೆಲ್ಸ ಸಿಕ್ಕಿ ಐವತ್ತ್ ಸಾವಿರ ಸಂಬಳ ಸಿಗ್ತ್ ಉಟ್ಟು' 'ಹೌದಾ ಮಂಜ. ನಿನ್ನ ಅಪ್ಪ ಇಷ್ಟರವರೆಗೆ ಇದ್ದಿದ್ದರೆ! ಎಷ್ಟೋ ಕುಸಿ ಪಡ್ತೆತ್ತಿದ್ದ. ಇನ್ನ್ ನನ್ನಂದ ನಿಂಗೆ ಒಂದ್ ಕೆಲ್ಸ ಆಕೆ ಉಟ್ಟು. ನಿಂಗೊಂದ್ ಗೂಡೆನ ಮೊದ್ವೆ ಮಾಡ್ಸಿಕೆ ಆಸೆ' 'ಆದು ಅಮ್ಮ ನೀ ಹೇಳ್ದ ಗೂಡೆನ ಮೊದ್ವೆ ಆನೆ' ಒಪ್ಪಿಕಣ್ತ್ ಮಂಜ. ಬಾರಿ ಪೊರ್ಲುನ ಗೂಡೆ, ತುಂಬಾ ಬುದ್ಧಿವಂತೆಂತ ನೆನ್ಸಿದ ಅಮ್ಮ, ಗೂಡೆನ ನೋಡಿ ಅಂದಾಜಿ ಮಾಡಿದ. ಗೂಡೆನ ಮಂಜಂಗೆ ಮೊದ್ವೆ ಮಾಡ್ಸಿದ. ಹೆಣ್ಣ್ ಸ್ವಾತಿ ಪೊರ್ಲು ಇತ್ತ್.

ಗೂಡೆ ಪೊರ್ಲ್ ಆಗಿದ್ದರು ಸ್ವಾರ್ಥಿ ಆಗಿತ್ತ್. ಅತ್ತೆ, ಗಂಡ ಅನ್ನುವ ಗೌರವ, ಪ್ರೀತಿ ಅವಳಿಗಿತ್ಲೆ. ಸ್ವಾತಿನ ವರ್ತನೆ ನೋಡ್‌ಕನ, ಗೌರಿಗೆ ಅವಳ ಅತ್ತೆನ ನೆನ್ಪ್ ಆಗ್ತಿತ್ತ್. ಆದರೂ ಅವಳ ಪ್ರೀತಿಲಿ ನೋಡ್ತಿತ್ತ್ ಗೌರಿ. ಒಂದ್ ದಿನ ಮಂಜನ ಒಟ್ಟಿಗೆ ಅವನ ಅಪ್ಪನ, ಅಜ್ಜಿನ, ಕತೆಗಳ ಹೇಳಿಕೆ ಕುದ್ದಿತ್ತ್. 'ಅಮ್ಮ, ಅಪ್ಪ ನಮ್ಮ ಇಷ್ಟ ಬೇಗ ಬುಟ್ಟ್ ಹೋದು ಬೇಡಾಗಿತ್ತ್. ಏನ್ ಮಾಡಿಕೆ ಆದೆ? ಒಂದಲ್ ಒಂದ್ ದಿನ ಹುಟ್ಟಿದ ಮೊನ್ಸ್ ಸತ್ತೇ ಸತ್ತವೆ. ಅಪ್ಪನ ಸಾವು ಸಾಮಾನ್ಯ ಅಲ್ಲ ಅಮ್ಮ' ಗೌರಿನ ಮನ್ಸ್ ಬೇಜಾರ್‌ನ ತಡ್ಕ್ಂಡಿತ್ತ್. 'ಮಂಜ ಈಗ ನಿಂಗೆ ಮೊದ್ವೆ ಆತ್, ಇನ್ನಾದರ್ ನಾವು ಅತ್ತೆ, ಸೊಸೆ, ಮಂಜ–ಂತ ಒಟ್ಟಿಗೆ ಇರೊಕು. ಇನ್ನ್ ನೀ ದೂರ ಹೋದು ಬೇಡ'

ಅತ್ತೆನ ಮಾತ್ ಕೇಳ್ಸಿಕಂಡ ಸ್ವಾತಿ 'ನಂಗೆ ಇಲ್ಲಿ ಇರಿಕೆ ಇಷ್ಟ ಇಲ್ಲೆ. ನೀವು ಅಜ್ಜಿನ ಒಟ್ಟಿಗೆ ಇರಿ. ನಾ ನೀವ್ಗೆ ಬೇಕಾದರೆ ನಾವು ಬೇರೆ ಹೋಕು. ನಂಗೆ ಅತ್ತೆಂತ ಕರಿಯಕೆ ಇಷ್ಟ ಇಲ್ಲೆ' ಹೆಣ್ಣ್‌ನ ಮಾತ್, ಗಂಡನ ಆಸೆನಾಂಗೆ ಆಗಿತ್ತ್.

'ಅಮ್ಮಾ ನಿನ್ನ ಸೊಸೆಗೆ ಇಲ್ಲಿ ಇರಿಕೆ, ಅತ್ತೆಂತ ಕರಿಯಕೆ ಇಷ್ಟ ಇಲ್ಲೆ. ಈ ಹಳ್ಳಿಲಿ ಇರ್ದು ಅವಳಿಗೆ ಕುಸಿ ಇಲ್ಲೆ. ಅಮೇರಿಕಾಕ್ಕೆ ನಾವು ಹೋಗ್ತ ಒಳ. ಅಡ್ಡಿ ಮಾಡ್ದು ಬೇಡ' ನಿನ್ನ ಇಷ್ಟದಾಂಗೆ ಮಾಡ್ ಮಂಜ. ನೀ ಅವಳ ಅಗ್ನಿ ಸಾಕ್ಷಿ ಆಗಿ ಮೊದ್ವೆ ಮಾಡಿಕಂಡಳ. ನನ್ನದೇನ್ ಅಡ್ಡಿ ಇಲ್ಲೆ. ಆದರೆ ಒಂದೇ ಒಂದ್ ಬೇಜಾರ್ ಮಂಜ ನಾ ಯಾಗೊಳ್ ಒಂಟಿ ಆಗಿ ಬೊದ್ಕೊಕುಂತ ಮಾತ್ರ ಬೇಜಾರ್ ಮಂಜ.' 'ಇಲ್ಲೆ ಅಮ್ಮ ಇಲ್ಲಿ ಇರಿಕೆ ಸಾಧ್ಯನೇ ಇಲ್ಲೆ ಒಂಟಿ ಆಗಿ ಇರ್ದು ಅನಿವಾರ್ಯ ಏನೂ ಮಾಡಿಕಾದ್ಲೆ. ನಿನ್ನ ಕಾಯಿಲೆ ಎಲ್ಲ ಸರಿ ಆಗುವವರೆಗೆ ಆಶ್ರಮಲಿ ಇರ್' 'ಏನಾ ಆಶ್ರಮನಾ!' 'ಹೌದ್ ಯಾಕೆ? ನಿನ್ನಂತವು ಎಷ್ಟೋ ಜನ ಒಳ. ಅವರ ಒಟ್ಟಿಗೆ ನೀನೂ ಕುಸಿಲಿ ಇದ್ದಿಯ' 'ಇಲ್ಲೆ ರಾಧ ಇದ್ ನನ್ನ ಊರ್. ಈ ದೇಶ ನಮ್ಮದ್ ನಿನ್ನ ಅಜ್ಜಿ, ಅಪ್ಪ ಕಟ್ಟಿದ ಮನೆ. ನಂಗೆ ಇಲ್ಲಿ ಇರಿಕೆನೇ ನೆಮ್ಮದಿ. ನೀನೂ ಇಲ್ಲೆ ಇರ್.

'ಅಮ್ಮ ನಿಂಗೆ ಕಡೆದಾಗಿ ಹೇಳ್ತ ಒಳೆ. ನನ್ನ ಒತ್ತಾಯ ಮಾಡ್ದು ಬೇಡ. ನಿಂಗೆ ಮನೆ ಬುಟ್ಟ್ ಹೋಕೆ ಆದ್ಲೆನಾ? ನಿಂಗಾಗಿ ಇಲ್ಲಿ ಇರಿಕೆ ನನ್ನಂದ ಸಾಧ್ಯ ಇಲ್ಲೆ. ನಿಂಗೆ ಎಷ್ಟ್

ದುಡ್ಡ್ ಬೇಕು ಅಷ್ಟ್ ನಾ ಕಳ್ಸಿನೆ' ಉಪಕಾರ ಮಾಡವರ ಹಂಗೆ ಹೇಳ್ತ್' ಓ ಇದ್ಕೆನ ಮಕ್ಕಳಿಗಾಗಿ ಅಪ್ಪ, ಅಮ್ಮ ಭಂಗ ಬಾದು? ವಿದ್ಯೆ ಕಲ್ಸುದು? ಈ ಪ್ರಾಯಲಿ ನಂಗೆ ಒಂಟಿ ಆಗಿ ಇರುವ ಕಾಲ ಬಾತಲ' ಅತ್ತೆ, ಗಂಡನ್ನ ಫೋಟೊ ಮಂಜನ ಜಾಲ್‌ಲಿ ಅಡ್ಸಿದ ಆಟಗಳ ನೆನ್ಪ್ ಮಾಡಿಕಂಡ್ ಗೌರಿ ಕಣ್ಣೀರ್ ಹಾಕಿತ್. 'ಮಕ್ಕ ಇಲ್ಲದ ಅಪ್ಪ, ಅಮ್ಮ, ಅನಾಥ. ಮಕ್ಕ ಇದ್ದರು ಅನಾಥ. ಕಾಟ ಸತ್ತವರ ಸುಟ್ಟರೆ ಚಿಂತೆ ಜೀವ ಇರುವವರ ಸುಟ್ಟದೆ' ಮಂಜ ನಿನ್ನ ಕಾಲ್ ಬೇಕಾದರ್ ಹಿಡ್ದನೆ. ನನ್ನ ಈ ಮನೆಂದ ದೂರ ಮಾಡ್ಬೇಡ' ಯಾಕೆ ಅಮ್ಮ ಈ ಮನೆ ಎಲ್ಲಿಗೂ ಹೋದ್ಲೆ. ಇದೇನ್ ಅಂತ ದೊಡ್ಡ ಅರಮನೆ ಅಲ್ಲ'

ಮಂಜನ ಮಾತ್ ಗೌರಿನ ಕೆನ್ನೆಗೆ ಹೊಡ್ದಿತ್ತ್. ಗೌರಿನ ಬಟ್ಟೆಗಳ ಜೋಡ್ಸಿ ಕಾರ್‌ಲಿ ಇಸಿ, ಗೌರಿನ ಕಾರ್ ಹತ್ತಿಗೆ ಮಂಜ ಹೇಳ್ತ್. ನನ್ನ ಮನೆನ ನೋಡ್ದು ಇದೆ ಕಡೆ–ಂತ ನೆನ್ಸಿಕಂಡ. ಕಾರ್ ವೃದ್ಧಾಶ್ರಮದ ಕಡೆ ಹೊರ್ಟ್ತ್.

ಒಂದ್ ಕಾಲಲಿ ಕುಸಿಂದ ಕೊಣ್ಣ್‌ಂದ ಆ ಮನೆ ದೂಳ್‌ಂದ ನಿದಾನಲಿ ಕಾಣೆ ಆತ್.

ಕುಸಿ, ಬೇನೆನ ಒಟ್ಟಿಗೆ ಕಡೆ ಸರ್ತಿ ಮನೆಗೆ ಕೈ ಮುಗ್ದ್ ಕಣ್ಣ್ ಮುಚ್ಚಿ ಕುದ್ದಿದ್ದ ಗೌರಿ.

ಅದೊಂದ್ ಪೊರ್ಲುನ ಊರು. ದೊಡ್ಡ ಬೋರ್ಡ್. ವೃದ್ಧಾಶ್ರಮ. ಬೋರ್ಡ್ ಎದ್‌ರ್ ನಿತ್ತಿತ್ತ್ ಕಾರ್. ಅಮ್ಮನ ಕಾಗದಗಳಿಗೆ ಸೈನ್ ಹಾಕಿ, ಗೌರಿನ ಅವ್ಕೆ ಒಪ್ಪಿಸಿ ಹೊರ್ಟ್ತ್. 'ರಾಧ ಯಾಗ ಬಂದಿಯಾ? ನಾ ಸಾಯಕೆ ಮುಂದೆ?' 'ನೀ ಒಂಟಿ ಆಗಿರ್ದು ಬೇಡಂತ ಇಲಿಗೆ ಕರ್ಕಂಡ್ ಬಂದರೆ ಏನೇನೋ ಮಾತಾಡಿಯ. ಇಲ್ಲಿ ನಿಂಗೆ ಯಾವ ತೊಂದರೆ ಇಲ್ಲೆ. ಅಂತದೇನ್ ಕಷ್ಟ ಇಲ್ಲಿ ಇಲ್ಲೆ.' ಹೊರ್ಟ್ ಹೋಗೇ ಬುಟ್ಟಿತ್ ರಾಧಕೃಷ್ಣ.

ಗೌರಿನ ಒಟ್ಟಿಗೆ ಇದ್ದ ಶಕ್ತಿನ ಎಲ್ಲ ಸೇರ್ಸಿ 'ಮಂಜ...' ಅಂತ ಕಿರ್ಚಿತ್. ರಾಧಾಕೃಷ್ಣಂಗೆ ಕೇಳ್ತಾ ಇಲ್ಲೆನಾ ಗೊತ್ಲೆ.

ಗೌರಿಗೆ ಯಾವ ಉಪಾಯ ಇಲ್ಲದೆ ಆಶ್ರಮದ ನಿಯಮಕೆ ಹೊಂದಿಕಂಡಿತ್ತ್. ಅಲ್ಲಿ ಇರುವ ಜನಗಳ ಜೀವನದ ಕಥೆಗಳ ಕೇಳಿ ಗೌರಿನ ಬೇನೆ ಕಡ್ಮೆ ಆತ್. ವರ್ಷ ಸದ್ದ್ ಇಲ್ಲದೆ ಕಳ್ದ್ ಹೋತ್. ಕಾಲ ಅವ್ಕೆಗಾಗಿ ಕಾತ್ಲೆ. ಏಳೆಂಟ್ ವರ್ಷಲಿ ರಾಧಾಕೃಷ್ಣ ಎರೆಡ್ ಮೂರ್ ಸರ್ತಿ ಆಶ್ರಮಕೆ ಬಂದ್ ನೋಡಿ ಹೋಗಿತ್ತ್. ಹಂಗೆ ಬಂದವ 'ಅಮ್ಮ ನೀ ಅಜ್ಜಿ ಆಗಳ. ನಿಂಗೊಂದ್ ಪಿಳ್ಳಿ ಆವುಟು' ಗೌರಿನ ಕಣ್ಣ್‌ಲಿ ನೀರ್ ಹನ್ಕಿತ್. 'ಯಾಕೆ ಅಮ್ಮ ಕುಸಿ ಇಲ್ಲೆನಾ?' 'ಹಾಂಗೆ ಏನ್ ಇಲ್ಲೆ. ಅಂದ್‌ನ ಕತೆ ನೆನ್ಪಾತ್. ನೀ ಹುಟ್ಟ್‌ಕನ ನಾ ಎಲ್ಲಿದ್ದೆ ಈಗ ಎಲ್ಲಿ ಒಳೆ' ಪರಶುರಾಮ ಅವನ ಅಮ್ಮನ ಒಟ್ಟಿಗೆ ಹೇಳ್ದ ಮಾತ್ ಗೌರಿನ ಕೆಬಿಗೆ ಕೇಳ್ದಾಂಗೆ ಆಗಿತ್ತ್.

* * * * *

## ಹೊಸ ಬೊದ್ಕು

ಜೋರಾದ ಚಪ್ಪಾಳೆ ಸದ್ದ್‌ಗೆ ಗೌರಿ ಕಣ್ಣ್‌ಲಿ ಬಂದ ನೀರ್ ಅವಳ ಕೆನ್ನೆ ಮೇಲೆ ಇಳ್ದ್ ಹೋಗ್ತಿತ್ತ್. ಯಾರಾದ್ರ್ ನೋಡಿರೆಂತ ಅವಳ ಸೆರ್‌ಂಗ್ ಕೊಡಿಂದ್ ಕೆನ್ನೆನ ಒರ್ಸಿಕಂಡಿತ್ತ್. ವೇದಿಕೆ ಕಡೆ ಕಣ್ಣ್ ಬುಡ್ಸಿ ನೋಡ್ತ್ ಸನ್ಮಾನ ಆಗ್ತಾ ಉಟ್ಟು. ಭಾಷಣ ಮಾಡ್ದವು ರಾಧಾಕೃಷ್ಣನ ಸಾಧನೆ, ಅವರ ಅಪ್ಪ, ಅಮ್ಮನ ಪ್ರೀತಿಂದ ಬಂದ ಅಭಿಮಾನವೇ ಈ ಪ್ರಬಂಧ ಬರಿಯಕೆ ಸಾಕ್ಷಿ ಅಂತ ಒತ್ತಿ ಹೇಳ್ದ ಇನ್ನೊಂದ್ ವಿಶೇಷ ರಾಧಾಕೃಷ್ಣ ಅವು ಅವರ ಅಮ್ಮನ ಇಂದ್‌ನವರೆಗೆ ಬುಟ್ಟ್ ಹಾಕದೆ ಅವರ ಕೂಡ ಸಭೆಗೆ ಕರ್ಕ್ಂಡ್ ಬಂದಳ. ಅವು ಕೂಡ ವೇದಿಕೆಗೆ ಬರೊಕುಂತ ಬೇಡಿಕಂಡ. ವೇದಿಕೆಂದ ಕೆಳಗೆ ಇಳ್ದ್ ಬಂದ್ ಅಮ್ಮನ ಕಾಲ್ ಹಿಡ್ದ್ ಅಮ್ಮನ ಕರ್ಕ್ಂಡ್ ಹೋತ್. ಏನೂ ಮಾತಾಡದೆ ಮೊರ್ಯಾದೆ ಹೋಕೆ ಆಗದ್‌ಂತ ಆಶೀರ್ವಾದ ಮಾಡ್ದ ಅಮ್ಮ ವೇದಿಕೆಗೆ ಮಂಜನೊಟ್ಟಿಗೆ ಹತ್ತಿದ್ದ. ವೇದಿಕೆ ಮೇಲೆ ಇದ್ದ ಗೌರಿನ ಮನ್ಸ್‌ನ ಭಾವನೆ ಕಣ್ಣೀರ್ ಆಗಿ ಹರ್ದ್ ಹೋತ್. ನೋಡ್ದ ಜನಗಳಿಗೆ ಅದ್ ಕುಸಿನ ಪನ್ನೀರ್ ಆಗಿ ಕಂಡಿತ್ತ್. ಸನ್ಮಾನ ಮುಗ್ಸಿ ಅಮ್ಮ, ಮಂಜ, ಸೊಸೆ, ಪಿಳ್ಳಿ ಕಾರ್ ಹತ್ತಿದ. ಕಾರ್ ದೂಳ್ ಎದ್ರಿಸಿ ಮತ್ತೆ ಮೋರೆ ಮಾಡಿತ್ತ್ ಆಶ್ರಮದ ಕಡೆ.

ಕಾರ್ ಒಳಗೆ ನಾಲ್ಕು ಇನ ಇದ್ದರು. ಯಾವ ಸದ್ದ್ ಸುದ್ದಿ ಇತ್ಲೆ.

ಆಶ್ರಮದ ಬೋರ್ಡ್ ನೋಡ್ದ ಗೌರಿ 'ಮಂಜ ಇಂದ್ ನಿನ್ನ ಅಪ್ಪ ಇದ್ದಿದ್ದರೆ ಅವ್ಕೆ ತುಂಬಾ ಕುಸಿ ಆಗ್ತಿತ್ತ್. ಒಂದ್ ಸರ್ತಿ ನಾ ಬಾಳ್ದ್ ಮನೆನ ನೋಡ್‌ವ ಆಸೆ ನಂಗೆ ಉಟ್ಟು ಮಂಜ. ಮತ್ತೆ ಇಲ್ಲಿ ಇದ್ದನೆ.' ಅಮ್ಮನ ಮೇಲೆ ಸಿಟ್ಟ್ ಬಂದ್ ನಾ ಯಾಕೆ ಇಲ್ಲಿಂದ ಕರ್ಕ್ಂಡ್ ಹೋದೆ ಸನ್ಮಾನಕೆ?' ಕಾರ್ ತಿರ್ಗಿಸಿತ್.

'ಡ್ಯಾಡಿ ಇವು ಯಾರ್' 'ಮಂಜ ನಾ ನಿನ್ನ ಅಜ್ಜಿ'

ಪಿಳ್ಳಿನ ತಬ್ಬಿ ಹಿಡ್ದಿತ್ತ್ ಗೌರಿ. 'ಅಂದರೆ ನೀವು ಡ್ಯಾಡಿನ ಮಮ್ಮಿನಾ?' ಅಷ್ಟ್ ಹೊತ್ತ್‌ಲಿ ಕಾರ್ ಮನೆ ಮುಂದೆ ನಿತ್ತಿತ್ತ್. ಗೌರಿಗೆ ಮನೆ ನೋಡಿ ಸ್ವರ್ಗ ಕಂಡಂಗೆ ಆತ್. ಕಾರ್ ಬಾಗ್‌ಲ್ ತೆಗ್ದ್ ಮೆಲ್ಲ ಕೆಳೆಗೆ ಇಳ್ದ ಗೌರಿ.

'ಡ್ಯಾಡಿ ನಿನ್ನ ಮಮ್ಮಿನ ಯಾಕೆ ಆಶ್ರಮಕೆ ಕರ್ಕ್ಂಡ್ ಹೋದ್? ನಿನ್ನ ಮಮ್ಮಿ ಯಾಕೆ ನಿನ್ನ ಒಟ್ಟಿಗೆ ಇಲ್ಲೆ? ಅಂದ್ ಪ್ರಾಯಸ್ಥರ ಬಗ್ಗೆ ಪುಸ್ತಕ ಬರ್ದ... ನಿನ್ನ ಮಮ್ಮಿನ ಒಟ್ಟಿಗೆ ಕರ್ಕ್ಣದೆ ನೀ ಬರ್ದ ಪುಸ್ತಕ ಸುಳ್ಳಾ?' ಪಿಳ್ಳಿ ಹೇಳ್ದ ಮಾತ್ ಗೌರಿಗೆ ಕೇಳ್ತ್. ಇಡೀ ಸಮಾಜನೇ ಕೇಳುವ ಮಾತ್ ಪಿಳ್ಳಿನೇ ಕೇಳ್ತ್‌ಲಾ ಅಂತ ಕುಸಿಲಿ ಪಿಳ್ಳಿನ ಮೋರೆ ನೋಡ್ತ್ ಗೌರಿ. ಮನೆ ಮೆಟ್ಲ್ ಹತಿದಾಂಗೆ ಗೌರಿನ ಎದೆ ಒಳೆಗೆನ ಬಡಿತ ಜೋರ್ ಆತ್. ಉಸಿರ್ ಕಟ್ಟಿಕಂಡ್ ಬಾತ್. ಗೋಡೆಲಿ ನೇತಾಡ್‌ವ ಗಂಡನ, ಅತ್ತೆನ, ಫೋಟ ನೋಡಿ 'ಒಯ್ ನಾ ಬಂದೆ, ಅತ್ತೆ, ನಾ ಬಂದೆ ಇಂದ್‌ನ ಪ್ರೀತಿಗೆ ಅರ್ಥ ಇಲ್ಲೆ, ಯಾವ ವಸ್ತುಗೆ ಕೂಡ ಬೆಲೆ ಇಲ್ಲೆ. ಮತ್ತೆ ನಂಗೆ ಎಲ್ಲಿಟು ಬೆಲೆ?

ಇನ್ನ್ ನಾ ಇರ್ದುಲೆ ನಿಮ್ಮ ಒಟ್ಟಿಗೆ ನಾ ಬನ್ನೆ ಅತ್ತೆ'ಂತ ಜೋರ್ ಬೊಬ್ಬೆ ಹಾಕಿತ್ ಗೌರಿ.

## ಹೊಸ ಬೊದ್ಕು

'ಅಜ್ಜಿ, ಅಜ್ಜಿ, ಏನಾತ್ ನೀವ್ಗೆ?' ಪಿಳ್ಳೆನ ಮಾತ್ ಗೌರಿನ ಕೆಬಿಗೆ ಬೀತ್. ಕಡೆದಾಗಿ ಮನೆನ ಒಮ್ಮೆ ನೋಡಿ, ಗಂಡನ ರೂಪನ ಹೊತ್ತ ಪಿಳ್ಳೆನ ನೋಡಿ ಮಂಜನ ಕರ್ತ್. 'ಮಂಜ ರಾಧಾ... ನನ್ನ ಬುಟ್ಟ್ ನೀ ಎಲ್ಲಿಗೂ ಹೋದು ಬೇಡಾಂತ ಹೇಳ್ದ್ ನಿನ್ನ ಗಂಜಿ ತಿಂಬಕೆ ಅಲ್ಲ, ನಿನ್ನ ಹೆಣ್ಣ್‌ನ ಚಿನ್ನ ಹಾಕಿಕೆ ಅಲ್ಲ ಮಂಜ. ನಿನ್ನ ಅಪ್ಪ ನೀ ಸಣ್ಣದಿರ್‌ಕನ ತೀರಿ ಹೋಗಿದ್ದ ಅಪ್ಪನ ಸ್ಥಾನಲಿ ನಿತ್ತ್ ನಾಲ್ಕ್ ಮನೆಲಿ ಪಾತ್ರೆ ತೊಳ್ದ್, ನಾಲ್ಕು ಮನೆಲಿ ಬಟ್ಟೆ ತೊಳ್ದ್ ನಿಂಗೆ ಕೆಲ್ಸ ಸಿಕುವಲ್ಲಿಗೆ ಮುಟ್ಟ ಶಾಲೆಗೆ ಕಳ್ಸಿದೆ.

ಮಂಜ ನೀ ಅಂದ್ ನಂಗೆ ಹೇಳ್ದ ನಿಂಗೆ ಒಂದ್ ಕಣ್ಣ್ ನಿನ್ನ ಅಮ್ಮ–ಂತ ಕರಿಯಕೆ ನಂಗೆ ನಾಚಿಕೆ ಆದೆ–ಂತ. ನಂಗೆ ಬೇಜಾರ್ ಆತ್ಲೆ ಮಂಜ. ನಾ ಮಾಡುವ ಕಾರ್ಯಗಳ ಮಾಡಕುಂತ ನಿಂಗೆ ಮೊದ್ವೆ ಮಾಡ್ಸಿದೆ. ನಿನ್ನ ಹೆಣ್ಣ್‌ಗೆ ಅತ್ತೆ–ಂತ ಕರಿಯಕೆ ನಾಚಿಕೆ ಆತ್, ಅಜ್ಜಿ–ಂತ ಹೇಳ್ತ್. ನಂಗೆ ಬೇಜಾರ್ ಆತ್ಲೆ ಮಂಜ. ಹೆಣ್ಣ್‌ನ ಮಾತ್ ಕೇಳಿ ನನ್ನ ಆಶ್ರಮಕೆ ಸೇರ್ಸಿದ ನಂಗೆ ಬೇಜಾರ್ ಆತ್ಲೆ ಮಂಜ. ನಿಂಗೆ ಒಂದ್ ವಿಷಯ ಸತ್ಯ ಹೇಳದೆ ಸತ್ತನೆಂತ ಬೇಜಾರ್ ಇತ್ತ್ ಮಂಜ.

ಮಂಜ ನೀ ಸಣ್ಣದರಲ್ಲಿ ಆಟ ಆಡಿಕಂಡ್ ಇರ್‌ಕನ ನಿನ್ನ ಕಣ್ಣ್‌ಗೆ ಕೋಲ್ ತಾಂಗಿತ್. ಆಸ್ಪತ್ರೆಗೆ ಹೋಕನ ಆ ಕಣ್ಣ್ ಆಕಿಲೆ–ಂತ ಡಾಕ್ಟರ್ ಹೇಳ್ದ. ನನ್ನ ಕೂಸುನ ಭವಿಷ್ಯ ಹೋದೆ–ಂತ ಬೇಜಾರಾತ್. ಬೇರೆ ಕಣ್ಣ್ ಇಸಿಕೆ ಲಕ್ಷಕಟ್ಲೆ ನನ್ನ ಹಕ್ಲೆ ದುಡ್ಡ್ ಇತ್ಲೆ ಮಂಜ. ಅದ್ಕೆ ನನ್ನ ಒಂದ್ ಕಣ್ಣ್‌ನ ತೆಗ್ದ್ ನಿಂಗೆ ಇಸಿಕೆ ಡಾಕ್ಟರ್ ಒಟ್ಟಿಗೆ ಹೇಳ್ದೆ. ನನ್ನ ಜೀವನದ ಬಗ್ಗೆ ನೋಡಿಕಂಬಕೆ ಡಾಕ್ಟರ್ ನಂಗೆ ಹೇಳ್ದ. ಇಲ್ಲೆ ಡಾಕ್ಟರ್ ನನ್ನ ಮಂಜಂಗೆ ಯಾವ ಕೊರ್ತೆ ಬಾಕೆ ಆಗದ್. ನಾ ನಾಲ್ಕ್ ಮನೆಲಿ ಈ ಒಂದ್ ಕಣ್ಣ್‌ನ ತಕಂಡ್ ಕೆಲ್ಸ ಮಾಡ್ನೆ–ಂತ ಹೇಳ್ದೆ. ನಿನ್ನ ಆ ಬಲ ಪಕ್ಕಲಿ ಇರುವ ಕಣ್ಣ್ ನನ್ನದ್ ಮಂಜ. ನೀ ಅದರ ಜಾಕೃತೆ ನೋಡಿಕ. ಅಂದ್‌ಂದ ಇಂದ್‌ನ ವರೆಗೂ ನನ್ನ ಒಂದ್ ಕಣ್ಣ್‌ನ ಬಗ್ಗೆ ನೀ ಕೇಳ್ತ್‌ಲೆಲಾ ಮಂಜ. ಅದ್ಕೆ ನಿಂಗೆ ಹೇಳ್ತ ಒಳೆ.' ಕಣ್ಣ್ ತುಂಬ ಮನೆ, ಪಿಳ್ಳೆನ ನೋಡ್ದ ಗೌರಿ ಪೊರ್ಲುಲಿ ಜೀವ ಬುಟ್ಟ. ಮಂಜಂಗೆ ತಪ್ಪುನ ಅರ್ಥ ಆತ್. 'ಅಮ್ಮಾ... ನನ್ನ ಕ್ಷಮಿಸ್ ಕ್ಷಮಿಸಿಕೆ ಆಗದಂತ ತಪ್ಪ್ ಮಾಡ್ದೆ ಅಮ್ಮ... ಅವನ ತೊಡೆ ಮೇಲೆ ಗೌರಿನ ತಲೆನ ಇಸಿಕಂಡತ್ತ್. ಮಂಜನ ಯಾವ ಮಾತೂ ಗೌರಿಗೆ ಕೇಳ್ತ್‌ಲೆ. ಗೌರಿ ಆಗಳೇ ಇಹ ಲೋಕ ಯಾತ್ರೆಗೆ ಹೊರ್ಟಿತ್ತ್. ಕುಸು ಸಣ್ಣಂವ ಆದರೂ 'ನೀ ನಿನ್ನ ಮಮ್ಮಿನ ಸಾಂಕಿದ್ ಇದೆನಾ? ನೀ ತಕಂಡ ಪ್ರಶಸ್ತಿ ಇದ್ಕೆನಾ?' ಅಪ್ಪ, ಅಮ್ಮನ ಮೋರೆ ನೋಡಿ ಹೇಳ್ತ್ ಮಂಜನ ಮಾತ್ ರಾಧಾಕೃಷ್ಣನ ಹೊಟ್ಟೆಗೆ ಚೂರಿ ಹಾಕಿತ್.

* * * * *

ಉದಯಕುಮಾರಿ ಚೆಂಬು

ಇವ್ ಎಂ. ಚೆಂಬು ಗ್ರಾಮದ ಪೂಜಾರಿಗದ್ದೆ ದೇವಪ್ಪ ಮತ್ತೆ ವಾರಿಜ ದಂಪತಿಗಳ ಎರಡನೆ ಮಗಳ್. ಇವ್ ಸುಳ್ಯ ತಾಲೂಕ್ ಮಾಳಿಗೆಮನೆ ಪುಟ್ಟಣ್ಣ ಇವ್ರ ಒಟ್ಟಿಗೆ ಮೊದುವೆ ಆಗಿ ಒಂದ್ ಗಂಡ್ ಮತ್ತೆ ಒಂದ್ ಹೆಣ್ಣ್ ಮಕ್ಕಳ ಒಟ್ಟಿಗೆ ಜೀವನ ನಡ್ಸ್‌ತ ಒಳೊ.

ಇವರ ವಿಳಾಸ :
ಉದಯಕುಮಾರಿ ಚೆಂಬು
ಎಂ. ಚೆಂಬು ಗ್ರಾಮ,
ಮಡಿಕೇರಿ ತಾಲೂಕ್
ಮೊ : 9632900436



ಉದಯಕುಮಾರಿ ಚೆಂಬು

ಇವ್ ಎಂ. ಚೆಂಬು ಗ್ರಾಮದ
ಪೂಜಾರಿಗದ್ದೆ ದೇವಪ್ಪ ಮತ್ತೆ
ವಾರಿಜ ದಂಪತಿಗಳ ಎರಡನೆ
ಮಗಳ್. ಇವ್ ಸುಳ್ಯ ತಾಲೂಕ್
ಮಾಳಿಗೆಮನೆ ಪುಟ್ಟಣ್ಣ ಇವ್ರನ
ಮೊದುವೆ ಆಗಿ ಒಂದ್ ಗಂಡ್
ಮತ್ತೆ ಒಂದ್ ಹೆಣ್ಣ್ ಮಕ್ಕಳ
ಒಟ್ಟಿಗೆ ಜೀವನ ನಡ್ಸ್‌ತ ಒಳೊ.

ಇವರ ವಿಳಾಸ :
ಉದಯಕುಮಾರಿ ಚೆಂಬು
ಎಂ. ಚೆಂಬು ಗ್ರಾಮ,
ಮಡಿಕೇರಿ ತಾಲೂಕ್
ಮೊ : 9632900436